ಅರವಿಂದ ಗ್ರಂಥಮಾಲೆಯ ಕಾಣಿಕೆಯ ಕಮಲ

# ವೀರಪಥಿಕ

## ('ಅರಬಿ'ಯದ ಅಭಿಮನ್ಯು)



ಕವಿ :

"ಕಾಡಹಕ್ಕಿ"

ಜನೆವರಿ] ಆರಾಣೆ [೧೯೩೮

ಪ್ರಕಾಶಕರು :—
ಬಿ. ಡಿ. ಅಕ್ಕಿ ಬಿ. ಎ. ಎಲ್‌ಎಲ್. ಬಿ.
" ಅರವಿಂದ ಗ್ರಂಥಮಾಲಾ "
ಹಲಸಂಗಿ ( ಜಿಲ್ಲಾ-ವಿಜಾಪುರ )

ಸಂಪಾದಕರು :—
" **ಮಧುರಚೆನ್ನ** "

ಮುದ್ರಕರು :—
ಶೇಷಗಿರಿರಾವ ಗೋವಿಂದರಾವ ಕುಲಕರ್ಣಿ
ಸಾಧನ ಮುದ್ರಣಾಲಯ
ಧಾರವಾಡ

# ಪರಿವಿಡಿ

Aum

# ಮುನ್ನುಡಿ

ಗೆಳೆಯ ಧೂಲಾಸಾಹೇಬರ ಹಲಕೆಲವು ಕತೆಗಳೂ ಕವಿತೆಗಳೂ "ಕವಿ ಕಾಡಹಕ್ಕಿ—ಹಲಸಂಗಿ" ಎಂಬ ಉಪನಾಮದಿಂದ ಹಿಂದೆ 'ವಸಂತ'ದಲ್ಲಿಯೂ 'ಜಯಕರ್ನಾಟಕ'ದಲ್ಲಿಯೂ ಬರುತ್ತಿದ್ದವು. ಲಾವಣೀ ಸಾಹಿತ್ಯಕ್ಕೆ ಸಂಬಂಧಿಸಿದ 'ಜೀವನಸಂಗೀತ'ದ ಸಂಗ್ರಾಹಕರಿಬ್ಬರಲ್ಲಿ ಇವರೊಬ್ಬರು. ೧೮--೨೦ ವರುಷಗಳ ಹಿಂದೆ ಧಾರವಾಡದಲ್ಲಿ 'ಪ್ರಭಾತ'ವೆಂಬ ಕವಿತೆಯ ಮಾಸಿಕವು ಹೊರಡುತ್ತಿದ್ದ ಕಾಲದಲ್ಲಿ ಇವರಿಗೂ ನನಗೂ ಕವಿತೆ ಬರೆಯುವ ಅಭಿಲಾಷೆ ಹುಟ್ಟಿದ್ದು. ಈಚೆಗಿನ ದೀರ್ಘ ಕಾಲದಲ್ಲಿ ನಮ್ಮ ಕವಿತಾಕುಮಾರಿಯು ಆ ಕಲ್ಲಿಗೆ ಬಡಿದು ಈ ಕಲ್ಲಿಗೆ ಬಡಿದು ಕೊನೆಗೊಮ್ಮೆ ಪಥಕ್ಕೆ ಹತ್ತಿದಳು.

ಮಹಾಕವಿ ಕಾಳಿದಾಸನು, ಕೇವಲ ನೀತಿಯು ಭೀರುತ್ವವೆಂದೂ ಕೇವಲ ಶೌರ್ಯವು ಪಶುವೃತ್ತಿಯೆಂದೂ ಹಳಿದು ಅವೆರಡರ ಹೊಂದುವಳಿಯಲ್ಲಿಯೇ ಸಿದ್ಧಿಯೆಂದು ಹೇಳಿದ್ದು ಸರ್ವಶ್ರುತ. "ಕಾತರ್ಯಂ ಕೇವಲಾ ನೀತಿಃ, ಶೌರ್ಯಂ ಶ್ವಾಪದ ಚೇಷ್ಟಿತಮ್. ಅತಃ ಸಿದ್ಧಿಂ ಸಮೇತಾಭ್ಯಾಮ್ ಉಭಾಭ್ಯಾಂ ಅನ್ವಿಯೇಷ ಸಃ" (ರಘು ೧೭–೪೭) 'ವೀರಪಥಿಕ'ನು ಬರೀ ನೀತಿಯನ್ನಾಗಲಿ, ಬರೀ ಶೌರ್ಯವನ್ನಾಗಲಿ ಅವಲಂಬಿಸಿದವನಲ್ಲ. ಇವನಲ್ಲಿ ಎರಡೂ ಸಮವೇತವಾಗಿವೆ. 'ಪಡೆದು ಮಡಿದವ ಜಾಣ' ಮತ್ತು 'ತ್ಯಕ್ತೇನ ಭುಂಜೀಥಾಃ' ಎನ್ನುವ

ದಿವ್ಯೋಪದೇಶವನ್ನು ಈತನು ಸಫಲಗೊಳಿಸಿದ್ದಾನೆ. ಈತನಿಗೆ ಆತ್ಮನಿರೀಕ್ಷಣವೂ ಉಂಟು; ಕರ್ಮಪರೀಕ್ಷಣವೂ ಉಂಟು. ಮೊದಲು ಪಡೆಯುತ್ತಾನೆ; ಬಳಿಕ ಕರ್ತವ್ಯವನ್ನು ಕೊನೆಗಾಣಿಸುವುದಕ್ಕೆಂದು ಮಡಿಯುತ್ತಾನೆ.

ಗೆಳೆಯ ಧೂಲಾಸಾಹೇಬರಿಗೆ ಕರೆಯುವುದೊಂದು ಬರೆಯುವುದೊಂದು ಹೀಗೆ ೨ ಹೆಸರುಗಳಿದ್ದು 'ಕಾಸೀಮ'ಸಾಹೇಬರೆಂಬುದು ಇವರ ಇಟ್ಟ ಹೆಸರು. ತಮ್ಮ ಹೆಸರಿನ ಮಹಾಪುರುಷರ ಜೀವನದ ಮೇಲ್ಮೆಯನ್ನು ಮನನ ಮಾಡುವದರಿಂದ ಬಹಳ ಲಾಭವುಂಟು. ಬಹಳ ದಿನಗಳ ಹಿಂದೆ ಒಮ್ಮೆ ಗೆಳೆಯ ಬೇಂದ್ರೆಯವರು ನನಗೆ—'ನಿನ್ನ ಹೆಸರನ್ನೇ ನೆನೆ ಆಗ ಅದರಲ್ಲೇ ನಿನಗೆ ಬೇಕಾದ್ದು ಕಂಡೀತು' ಎಂದು ಬರೆದದ್ದುಂಟು. 'ಅರಬ್ಬಿಯದ ಅಭಿಮನ್ಯು' ಅಥವಾ 'ವೀರಕಾಸೀಮ' ಎಂಬ ದೀರ್ಘ ಕವಿತೆಯ ತಳದಲ್ಲಿ ಇಂಥದೊಂದು ಭಾವನೆಯುಂಟು.

ಒಟ್ಟಿನಮೇಲೆ ಇವರ ಈ ಕವಿತೆಗಳ ಬಗೆಗೆ ಹೇಳಬಹುದಾದುದೇನೆಂದರೆ— ತಮ್ಮ ತಮ್ಮ ಜೀವನವನ್ನು ವಿಶಿಷ್ಟ ಧ್ಯೇಯದ ಪಡಿಯಚ್ಚಿನಲ್ಲಿ ಎರಕ ಹೊಯ್ಯುವ ಆಧುನಿಕ ಧ್ಯೇಯವಾದೀ ಯುವಕರೆಲ್ಲರ ಜೀವನಪಥದಲ್ಲಿ ಬರುವ ದುರಂತ ಉತ್ಥಾನಪತನಗಳ ಹೃದಯೋಚ್ಛ್ವಾಸದ ತರಂಗಗಳೇ ಈ ಕವಿತೆಗಳು. ಹೊರಗಿನ ಒಳಗಿನ ಅಪರಿಮಿತ ವಿಘ್ನಬಾಧೆಗಳನ್ನು ಎದುರಿಸಿ ತಮ್ಮ ಧ್ಯೇಯದೆಡೆಗೆ ಸಾಗುವ ವೀರ ಪಥಿಕರ ಹಾದಿಯ ಹಾಡುಗಳಿವು. ಇಂಥ ಗೀತಗಳು ಈಗೀಗ ಅಲ್ಲಲ್ಲಿ ಒಂದೊಂದಾಗಿ ಹಣಿಕೆಹಾಕತೊಡಗಿವೆ. ಅವುಗಳೆಷ್ಟೋ ಇನ್ನೂ ಸಾಹಿತ್ಯದ ಸಂತೆಗೆ ಬಾರದೆ ಅಲ್ಲಲ್ಲಿಯೋ ದಾರೀಕಾಯುತ್ತಲಿವೆ.

ಇಂಥವುಗಳೆಷ್ಟೋ ನನಗೆ ಈಚೆಗೆ ಭೆಟ್ಟಿಯಾದದ್ದುಂಟು. ಅವೂ ಇಂದಿಲ್ಲ ನಾಳೆ ಬೈಲಿಗೆ ಬಂದಾವು.

ಗೆಳೆಯ ಧೂಲಾಸಾಹೇಬರ ಕವಿತೆಗಳ ವಸ್ತುವು ಇಂಥ ಮಹತ್ತರವಾದದ್ದು. ಆದರೆ ಅವುಗಳ ವೈಭವಗು ಹಲವೆಡೆಯಲ್ಲಿ ಹುರಬರಕಾಗಿ ತೋರುತ್ತಿದೆಯೆಂಬುದು ಒಪ್ಪಿಕೊಳ್ಳತಕ್ಕ ಮಾತು. ಅನ್ಯಸಹಾಯವಿಲ್ಲದೆ ನಮ್ಮಿಂದ ನಾವೇ ಬೆಳೆದು ಬರಬೇಕಾದ ಹೀನಪರಿಸ್ಥಿತಿಯ ಮೂಲಕ ಈ ಕೊಂಕು ಸಂಭವಿಸದೆ ನಿರ್ವಾಹವಿರಲಿಲ್ಲವೆಂದು ಮಾತ್ರ ಹೇಳಿಬಿಡುತ್ತೇನೆ. ಆಪತ್ಕಾಲದಲ್ಲಿ ನಡೆದದ್ದೇ ಧರ್ಮವಾದರೂ ಅದೇ ಸರ್ವಥೈವ ಯೋಗ್ಯವೆಂದು ಭಾವಿಸಿದರೆ ಮಾತ್ರ ಕ್ಷಮಿಸಲಾರದ ತಪ್ಪು. ಇದೇನೇ ಇರಲಿ.

'ವೀರಪಥಿಕ'ನ ಬಿಡಿಕವಿತೆಗಳನ್ನೆಲ್ಲ ಬೇಕೆಂತಲೇ ಒಂದು ಕ್ರಮದಲ್ಲಿ ಸೇರಿಸಿ, ಭಾವದ ಏಕತಾನತೆಯನ್ನು ತರಲಾಗಿದೆ. ಇದರ ಪ್ರಯೋಜನವು ವಿಪುಲವಾಗಿದೆಯೆಂದು ನನ್ನ ಭಾವನೆ. ಓದುಗರು ಈ ಜಾತಿಯ ಕೃತಿಗಳ ಒಳತಿರುಳಿಗೆ ಮೆಚ್ಚಿದರೆ ನಾಡಿನಲ್ಲಿ ಅಲ್ಲಲ್ಲಿ ದಾರೀಕಾಯುತ್ತಲಿರುವ ಇಂಥವೇ ಇನ್ನುಳಿದ ಕೃತಿಗಳಿಗೆ ಬೇಗನೆ ಬೈಲಿಗೆ ಬರುವದಕ್ಕೆ ಧೈರ್ಯವುಂಟಾಗುತ್ತದೆ.

**ಹಲಸಂಗಿ—** **ಮಧುರಚೆನ್ನ**

# ವಸ್ತುಪರಿಚಯ

## ( ಸಂಪಾದಕೀಯ )

### Aum

## ೧ ಪಥಿಕನ ಪಥಕ್ರಮ

'ವೀರಪಥಿಕ'ನು ದಿಗಂತವ್ಯಾಪಿಯಾದ ಮರುಪ್ರದೇಶದಲ್ಲಿ ಶಾಂತಿ ಜಲವನ್ನು ಅರಸುವ ಸಾಹಸಿಯು. 'ಒಮ್ಮೆ ಕುಡಿದರೆ ಸಾಕು, ತಿರುಗಿ ತೃಷೆ ತಾನೆಂದೂ ಸುಳಿಯಬಾರದು...... ಒಮ್ಮೆಯಾದರು ಇಂಥ ಅಮರಗಂಗೆಯ ಜಲವ ಸವಿಯಬೇಕು' ಎಂಬ ಆಶೆ ಅಂತಃಕರಣದಲ್ಲಿ ಒಮ್ಮೆ ಮನೆಮಾಡಿಕೊಂಡಿತೆಂದರೆ ಅದರ ಒಂದು ಬಿಂದುವನ್ನಾದರೂ ದೊರಕಿಸುವವರೆಗೆ ಜೀವಕ್ಕೆ ವಿರಾಮವಿಲ್ಲ.

ಅಂಥ ಅಮೃತ ಕಲಶವು ಯಾವನ ರಾಜಭಾಂಡಾರಕ್ಕೆ ಸೇರಿದುದೋ ಅಂಥ ಜಗದೊಡೆಯನಲ್ಲಿ ತೃಷಿತ ಜೀವವು ಮೊರೆಯಿಡತೊಡಗುವದು. 'ಸರ್ವಸಂಜೀವನದ ಸುಧೆಯ ಬಿಂದುವನೊಂದು ಸುರಿದು ಅಮರನನು ಮಾಡಬಾರದೇನು?' ಎಂದು ಬಾರಿ ಬಾರಿಗೆ ಬೇಡಿಕೊಳ್ಳುವದು.

ಪಥಿಕನು ಹೀಗೆ ಹೊರಬಾಗಿಲಲ್ಲಿ ನಿಂತು ಅಲವರಿಯುತ್ತಿರುವಾಗ 'ನಿರ್ವಾಣ ಸವಿಸುಖದ ಗೀರ್ವಾಣವಾಣಿ'ಯೊಂದು ತನ್ನ ಚಿತ್ತ

ದೊಳಗೇ ಉದ್ಭವಿಸಿ 'ಮರವಿನ ಮನಸೇ....ಗುರುವಿನ ಮಹಿಮೆಯು ಸೃಷ್ಟಿಯು!' ಎಂದು ಗದ್ದರಿಸಿ ಬೋಧಿಸುವದು.

ಆಗ 'ಗಿರಿಯಲ್ಲಿ ಝುರಿಯಲ್ಲಿ ಧರೆಯಲ್ಲಿ ದರಿಯಲ್ಲಿ'–ಎಲ್ಲೆಲ್ಲಿ ಅಂದರೆ ಅಲ್ಲಲ್ಲೆಲ್ಲ ಆ ದಿವ್ಯ ನಾದವೆ ಪ್ರತಿಧ್ವನಿಗುಡುತ್ತಿರುವದನ್ನು ಕಂಡು ಪಥಿಕನು 'ನಾಲ್ದೆಸೆಗು ಹರಡಿರುವ ಹಸುರು ಕುಸುರಿನ ಧರುಣಿಯನು ಕಣ್ತುಂಬ ಕಂಡು, ಮನಸು ಆರಿ' ಆ ನಾದದೊಂದಿಗೆ ತಾನೂ ಸ್ವರವನ್ನು ಕೂಡಿಸಿ ಹಿರಿಹಿಗ್ಗಿನಿಂದ ಹಾಡಲೆಳಸುವನು.

ಗಿರಿಕಂದರಗಳಲ್ಲಿ ಗೋವೃಂದದೊಡನೆ ಕೊಳಲನ್ನೂದುತ್ತ ತಿರುಗುವ ಗೋಪಾಲಕನಂತೆ ಪಥಿಕನು ಈಗ ವಿಶ್ವಲೀಲಾ ಲಹರಿಯೊಂದಿಗೆ 'ರವಿಯ ರಥವನ್ನೇರಿ, ವಿಶ್ವಭ್ರಮಣವ ಮಾಡಿ, ನಗುತಿಹನು ಆಡಿ ಹಾಡಿ!–ನವಿಸುಖದ ಕಲ್ಪನಾಕಾಶದೊಳು ಹಾರುವನು ಮೋಡಗಳ ಜೋಡಿಗೂಡಿ!!!'

ಕವಿಯಾಗಿ ನವಿಸುಖದ ನೆಲೆಯನ್ನರಿತ ಬಳಿಕ ಅದಕ್ಕಿಂತ ಮುಂದಿನ ನೆಲೆಯನ್ನರಸುವುದಕ್ಕೆ 'ಮನ್ಮನ ಮಹಾಸಿಂಧು, ತಳತಳಕ ಮುಳುಗಿ.....ವಿಪುಲಭೋಗ ಭಾಂಡಾರವನು ಒಡೆಯುವೆನು ಯೋಗದಲ್ಲಿ' ಎಂದು ಹುರಿಕೊಟ್ಟು ನಿಲ್ಲುವನು.

ಹೀಗೆ ಬಾಹ್ಯಾರಾಮದಲ್ಲಿ ಭಗವಂತನ ಬೆಳಕು ಮುಡುಗಟ್ಟಿ ನಿಂತಿರುವುದನ್ನು ಕಂಡು ತಣಿದರೂ ಅಂತರಂಗದ ಆಳವಾದ ಸಮುದ್ರ ತಳದಲ್ಲಿ ಅಪ್ರಕಾಶಿತವಾಗಿ ಮಲಗಿಕೊಂಡಿರುವ ಮುತ್ತುರತ್ನಗಳ ಪ್ರಭೆಗೆ ಅಂತಃಕರಣವು ಆಶೆಗೊಳ್ಳುತ್ತಲೇ ಇದ್ದಿತು. ಹೀಗಿರಲು

ಒಮ್ಮೆ ಉಪಾಸನೆಯ ತಿಂಗಳಲ್ಲಿ ಪಥಿಕನು ಸಂಜೆಯ ಪ್ರಾರ್ಥನೆಯಲ್ಲಿದ್ದಾಗ ಒಮ್ಮೆಲೆ ಆತನಿಗೆ ಕುಳಿತುಕುಳಿತಲ್ಲಿಯೆ ಗಾಢವಿಸ್ಮೃತಿ ಬಂದು ಬೆಳಗಿನ ಬೆಳಕು ಮೂಡುವಹೊತ್ತಿನವರೆಗೆ ಏನೇನೂ ಇಲ್ಲದ ಮಹಾ ನಿಷ್ಕಂಪಸ್ಥಿತಿಯುಂಟಾಯಿತು. ಬಳಿಕ ಮೆಲ್ಲನೆ ಕಣ್ಣು ಅರೆ 'ನೆನಪು ದೋರಿತು ಇತ್ತ; ನಸುಕು ಹರಿಯಿತು ಅತ್ತ; ಹತ್ತು ತಾಸಿನ ಹಿಗ್ಗು ಹಾಡನೇರಿ' ಅಂತರಾರಾಮದ ಪ್ರಭಾತ ಮಂಗಲ ಗೀತವು ಒಡನೆಯೆ ಪ್ರಕಟವಾಯಿತು.

ಈ ಅಂತರಾರಾಮದಿಂದ 'ಮರೆವು ಮತ್ಸರ ಕರಗಿ ಕಷ್ಟನಷ್ಟವು ಸುಟ್ಟುಭರದಿ ಭಸ್ಮೀಭೂತವಾಗಿ ಹಾರಿ, ಅರಿವು ಅಗಲಾಗಿ ಅದ್ಭುತದ ಅಘಟಿತಶಕ್ತಿ ಹೊಡಕರಿಸಿ ಹೊಳೆ'ದದ್ದರಿಂದ ಪಥಿಕನಿಗೆ ಸಾವು ಕೂಡ ಹೂವಿನಷ್ಟು ಹಗುರೆನಿಸದಿದ್ದೀತೆ?

ಅಮರತ್ವವೆಂದರೆ ಸಾಯದೆ ಇರುವುದೇನೂ ಅಲ್ಲ; ಸಾವುನೋವುಗಳ ಕಳವಳಿಕೆ ತಪ್ಪುವದೇ ಅಮರತ್ವ. ಲೌಕಿಕದ ಯಂತ್ರದಲ್ಲಿ ಸಿಕ್ಕು ಹಿಂಡಿ ಹಿಪ್ಪೆಯಾಗುತ್ತಿರುವ ಜೀವವು ಮಂತ್ರಗಾರನ ಮೋಹಿನೀ ವಿದ್ಯೆಯಿಂದ ಮಂಕುಗೊಂಡ ಹಾವಿನಂತೆ ಮಬ್ಬಿನಲ್ಲಿ ಬಿದ್ದಿರುತ್ತದೆ. ಆದರೆ ನಿಜವಾಗಿ ನೋಡಿದರೆ ಒಳಗೊಳಗೆ ಅದು ಅಮರತ್ವದ ತೊಟ್ಟಿಲಲ್ಲಾಡುತ್ತಿರುವ ದಿವ್ಯಶಿಶುವೇ ಆಗಿದೆ. ಅದು ಎಚ್ಚತ್ತು ತನ್ನ ಹಕ್ಕಿನ ಅಮರತ್ವವನ್ನು ವಶಪಡಿಸಿಕೊಂಡರೆ ಆಗ ಅದಕ್ಕೆ ಇನ್ನೇನುಬೇಕು! ಎಲ್ಲರನ್ನು ಅಂಜಿಸುವ ಸಾವು ಇಂಥವರ ಪಾಲಿಗೆ ಆಶೆಪಟ್ಟು ಮೂಸಬೇಕೆನಿಸುವ ಹೂವಾಗಿಬಿಡುತ್ತದೆ.

———

## ೨ ಅಮರತ್ವದ ಅನುಪಮ ಕಥೆ

ಸರ್ವಪರಿಶ್ರಮದ ಪುಣ್ಯಫಲವಾಗಿ ಲಭಿಸುವ ಮೃತ್ಯುಭಯ ವಿನಾಶಕವಾದ ಇಂಥ ಅಮರತ್ವವೆಂಬುದು ಯಾರ್ಕೈ ಎಷ್ಟು ಅಗ ಲವೋ ಅವರಿಗೆ ಅಷ್ಟು ಲಭಿಸುವದು. ಆದರೂ ಅವರವರ ಕೈತುಂಬು ವಷ್ಟು ಸಿಕ್ಕರೆ ಅವರವರಿಗೆ ಅಷ್ಟೇ ಸಾಕಾಗಬಲ್ಲದು. ಆನೆಗೆ ಬಂಡಿ ತುಂಬ ಕಬ್ಬು ಬೇಕಾದರೆ ಇರುವೆಗೆ ಒಂದು ಕಣ ಮಾತ್ರವೇ ಆದರೆ ಸಾಕು. ಆದರ ಫಲದಿಂದ ಆನೆಯು ಕಾಡೊಳಗಿನ ಬಲ್ಮರಗಳನ್ನು ಕಿತ್ತಿ ದರೆ ಇರುವೆಯು ತನಗಿಂತ ಗಾತ್ರವಾದ ಒಂದು ಅಕ್ಕಿಯು ಕಾಳನ್ನಾ ದರೂ ಹೊತ್ತುಹಾಕಬಲ್ಲದು.

ಅರಬಸ್ಥಾನದಲ್ಲಿ ಪುರಾತನಕಾಲದೊಳಗೆ ಇಂಥ ಐರಾವತವೊಂದು ಅವತರಿಸಿ ಕಗ್ಗಕಾಡನ್ನೆಲ್ಲ ದಗ್ಗುದುಳಿದ ಕೆಲಕಾಲದೊಳಗಾಗಿಯೇ ಅಂಥದೇ ಒಂದು ಮರಿತೇಜಿಯು ಮುಂದೆ ಬಂದು ತನ್ನ ಆತ್ಮಾರ್ಪಣ ದಿಂದ ಕುಲಕೋಟಿಗೆಲ್ಲ ಅಮರಕೀರ್ತಿಯನ್ನು ದೊರಕಿಸಿಕೊಟ್ಟಿತು.

ಹಜರತ ಮುಹಮ್ಮದ ಪೈಗಂಬರರ ಮರಿಮಗನಾದ ಕಿಶೋರ ಕಾಸೀಮನು ಕಾಳಗದ ಕಣದಲ್ಲಿ ವೀರಅಭಿಮನ್ಯುವಿನಂತೆ ಕಾದಿ ಮೃತ್ಯುವನ್ನು ತೃಣಕ್ಕಿಂತ ಕಡೆಯಾಗಿ ಮಾಡಿತೋರಿಸಿದ ಆತ್ಮ ವಿಜಯದ ದುಂದುಭಿಯು ಇಂದಿಗೂ ಮೊಳಗುತ್ತಲಿದೆ.

ಹಜರತ ಪೈಗಂಬರರು ಈಶಕಾರ್ಯವನ್ನು ಪೂರೈಸಿ ದೇಹ ಬಿಟ್ಟ ಮೇಲೆ ಅವರ ಧರ್ಮಸಿಂಹಾಸನದ ಬಾಧ್ಯತೆಯು ಸಲುವಾಗಿ ಅವರ

ಮೊಮ್ಮಕ್ಕಳಿಗೂ, ಶಿಷ್ಯರಲ್ಲೊಬ್ಬನ ಸಂತಾನಕ್ಕೂ ದೈವದುರ್ವಿಪಾಕ ದಿಂದ ಕಲಹ ಹುಟ್ಟಿತು. ಒಮ್ಮೆ ವೈಮನಸ್ಸು ಹುಟ್ಟಿದ ಮೇಲೆ ಅನಿ ವಾರ್ಯವಾಗಿ ಬಂದರ ಹಿಂದೊಂದು ವಿಷೋ ಉಪಕಾರಣಗಳು ತಲೆ ದೋರಿದವು. ಪೈಗಂಬರರ ಮಗಳ ಮಕ್ಕಳಿಬ್ಬರಲ್ಲಿ ಹಿರಿಯುವರೂ ವೀರ ಕಾಸೀಮನ ಪೂಜ್ಯಜನಕರೂ ಆದ ಹಜರತ ಹಸನರನ್ನು ಶತ್ರುಪಕ್ಷ ದವರು ಮೋಸದಿಂದ ಹೆಂಗಸರ ಕೈಯಿಂದ ವಿಷಪ್ರಯೋಗ ಮಾಡಿಸಿ ಕೊಲೆಮಾಡಿಸಿದರು. ಬಳಿಕ ವೈರಿಯಾದ ಎಜಿದನು ಹಜರತ ಹಸನರ ತಮ್ಮಂದಿರಾದ ಹಜರತ ಹುಸೇನರನ್ನೂ ಕೊಲೆ ಮಾಡುವ ಪ್ರಯತ್ನ ದಲ್ಲಿ ತೊಡಗಿದನು.

ಕೊನೆಗೆ ಹಜರತ ಹುಸೇನರಿಗೂ ಎಜಿದನಿಗೂ ಕರ್ಬಲಾದ ಉಸುಬಿನ ಬಯಲಲ್ಲಿ ಘನಘೋರ ಸಂಗ್ರಾಮವೆಸಗಿತು. ವೈರಿಗಳು ಇದ್ದೊಂದು ಹೊಳೆಯಲ್ಲಿ ವಿಷವನ್ನು ಬೆರಿಸಿದ್ದರಿಂದ ಆ ಯುದ್ಧದಲ್ಲಿ ಹಜರತ ಹುಸೇನರ ದಂಡಾಳುಗಳು ನೀರಿಲ್ಲದೆ ಒಬ್ಬೊಬ್ಬರೇ ಮಡಿ ಯುತ್ತಿರುವದನ್ನು ಕಂಡು ಅವರು ಪರಮಾವಧಿ ಚಿಂತೆಗೊಳಗಾದಾಗ ಅವರ ಅಣ್ಣನ ಮಗನಾದ ಕಿಶೋರ ಕಾಸೀಮನು ತನ್ನ ಕಕ್ಕಂದಿರ ಬಳಿಗೆ ಬಂದು ತನಗೆ ಕಾಳಗಕ್ಕೆ ಹೊರಡುವುದಕ್ಕೆ ಭಾರತ ಯುದ್ಧದಲ್ಲಿ ಧರ್ಮ ರಾಯನಿಗೆ ಅಭಿಮನ್ಯು ಕೇಳಿದಂತೆ ಅಪ್ಪಣೆಯನ್ನು ಅಪೇಕ್ಷಿಸಿದನು.

* ಹಜರತ ಹುಸೇನರು ಹುಡುಗನ ವೀರಶ್ರೀಗೆ ಮೆಚ್ಚಿ ಮುದ್ದಾ ಡಿದರಾದರೂ ಯುದ್ಧಕ್ಕೆ ಹೋಗಲು ಅಪ್ಪಣೆ ಕೊಡುವುದಕ್ಕೆ ಅವ ರಿಂದಾಗಲಿಲ್ಲ. ಮರಳಿ ಪಾಳಯಕ್ಕೆ ಹೋಗೆಂದು ಹೇಳಿದರು. ಆದರೆ ಆ

---

* ೧೯೨೦ರಲ್ಲಿ ವಾಗ್ಭೂಷಣದೊಳಗೆ ಶ್ರೀಮಾನ್ ಪಂಡಿತ ಮ. ಪ್ರ. ಪೂಜಾರ ರವರು ಬರೆದ ‘ ಮೋಹರಮ್ ’ ಎಂಬ ಪ್ರಬಂಧದಿಂದ ಆರಿಸಿಕೊಳ್ಳಲಾಗಿದೆ.

ವೀರಪುತ್ರನು ಒಂದು ಹೆಜ್ಜೆಯನ್ನು ಕೂಡ ಹಿಂದೆ ಇಡಲಿಲ್ಲ. ಮತ್ತು ರಕ್ಕಸಿಗೆ—'ನಮ್ಮ ದಂಡಿನಲ್ಲಿ ಎಷ್ಟೋ ಜನರು ನೀರಿಲ್ಲದೆ ಪ್ರಾಣಬಿಡುತ್ತಿರುವದನ್ನು ಕಣ್ಣಾರೆ ನೋಡುತ್ತ ನಾನು ಬದುಕಿರುವದು ಹೇಡಿತನವಲ್ಲವೇ? ನೀರಡಿಕೆಯ ಈ ತಳಮಳವನ್ನು ನಾನು ನೋಡಲಾರೆನು. ನನಗೆ ಅಪ್ಪಣೆಯನ್ನು ಕೊಟ್ಟುಬಿಡಿರಿ' ಎಂದು ಕೇಳಿಕೊಂಡನು.

ಆಗ ಹಜರತ ಹುಸೇನರು ಗದ್ಗದಿತಕಂಠರಾಗಿ—'ಅಪ್ಪಾ! ನಿನ್ನ ತಂದೆಯು ಸಾಯುವಾಗ ನಿನ್ನನ್ನು ನನ್ನ ಕೈಯಲ್ಲಿ ಕೊಟ್ಟರು. ಮಗನೇ, ನಿನ್ನನ್ನು ಯುದ್ಧಕ್ಕೆ ಹೇಗೆ ಕಳಿಸಲಿ? ಮಗನೇ, ಹದಿನಾಲ್ಕು ವರ್ಷದಮಗನನ್ನು ಹಗೆಗಳ ಒಡ್ಡನ್ನು ಒಡೆಯಲೋಸುಗ ಹೋಗೆನ್ನುವಾಗ ಎದೆಯು 'ಧಗ್' ಎನ್ನುತ್ತದೆ. ಸೈರಿಸುವದು ಹೇಗೆ? ಮೊದಲು ನಿನ್ನ ತಾಯಿಯನ್ನು ಕೇಳಿಕೊಂಡು ಬಾ.' ಎಂದು ಹೇಳಿದರು.

ಕಾಸೀಮನ ತಾಯಿಯಾದ ಹಸೀನಾಬಾನುವು ವೀರಮಾತೆಗೆ ತಕ್ಕಂತೆ ಮಗನಿಗೆ ಯುದ್ಧಕ್ಕೆ ಅಪ್ಪಣೆಯನ್ನಿತ್ತಳು. ಕಾಸೀಮನು ತಾಯಿಯ ಅಪ್ಪಣೆ ದೊರೆತದ್ದನ್ನು ಚಿಕ್ಕಪ್ಪನಾದ ಹಜರತ ಹುಸೇನರಿಗೆ ಹೇಳಿದನು. ಆಗ ಹಜರತ ಹುಸೇನರು ಮತ್ತೆ—'ತಮ್ಮಾ, ನಿನ್ನ ತಂದೆಯು ಸಾಯುವಾಗ ಇನ್ನೊಂದು ಮಾತನ್ನು ಹೇಳಿರುವರು. ನನ್ನ ಮಗಳು ಸಕೀನಾಬಾನುವನ್ನು ನಿನಗೆ ಮದುವೆ ಮಾಡಬೇಕೆಂದು ಅವರ ಬಯಕೆಯಿತ್ತು. ಈಗ ನೀನು ಅವಳನ್ನು ಮದುವೆಯಾಗಿ ನಿನ್ನ ತಂದೆಯ ಬಯಕೆಯನ್ನು ನೆರವೇರಿಸು' ಎಂದು ಹೇಳಿದರು. ಅದಕ್ಕೆ ಕಾಸೀಮನು ಬೆರಗಾಗಿ ನಿಂತನು. ಬಳಿಕ ತಲೆವಾಗಿ ನಿಂತು—'ಅಪ್ಪಾ, ಇದು ಮದುವೆಯ ಸಮಯವೆ?' ಎಂದನು. ಹಜರತ ಹುಸೇನರು ಕಾಸೀಮನ ತಾಯಿಗೂ ಈ ಮದುವೆಯ ಮಾತನ್ನು ಹೇಳಿ ಕಳಿಸಲು

ಆಕೆಯೂ ತನ್ನ ಗಂಡನ ಕೊನೆಯ ಬಯಕೆಯನ್ನು ನಡೆಸುವದಕ್ಕೆ ಒಪ್ಪಿಗೆಯನ್ನು ಕೊಟ್ಟಳು.

ಈಗಲೇ ಕಾಸೀಮನ ಮದುವೆ! ಅಪಾರವಾದ ದುಃಖಸಾಗರ ದಲ್ಲಿ ಆನಂದದ ಒಂದು ಸಣ್ಣ ತೆರೆ! ಹಜರತ ಹುಸೇನರ ಪಾಳಯದಲ್ಲಿ ಯಾರ ಮೋರೆಯ ಮೇಲೂ ನಗೆಯ ಕಳೆಯಿಲ್ಲ. ಆದರೂ ಈ ದಿವಸ ಮದುವೆ.

ಇತ್ತ ಹಜರತ ಹುಸೇನರ ಕಡೆಯವರು ಯಾರೂ ಕಾಳಗಕ್ಕೆ ಬಾರದಿರುವದನ್ನು ಕಂಡು ಎಜಿದನ ದಂಡಿನಲ್ಲಿ ಹರ್ಷದ ಕಲಕಲ ವೆದ್ದಿತು. ಇಂಥ ದುಃಖಕಾಲದಲ್ಲಿ ಹಜರತ ಹುಸೇನರು ಮಗಳ ಲಗ್ನವನ್ನು ಮಾಡಿದರು.

ವಧೂವರರು ಓರಗೆಯವರು. ಒಬ್ಬರೊಡನೆ ಒಬ್ಬರು ಮಾತಾಡು ವದಕ್ಕೂ, ಒಬ್ಬರನ್ನೊಬ್ಬರು ನೋಡುವದಕ್ಕೂ ಕೂಡ ಈಗ ಅವಕಾಶ ವಿಲ್ಲ. ಕಾಸೀಮನು ಹೊಸ ಹೆಂಡತಿಯ ಒಪ್ಪಿಗೆಯನ್ನು ಹೇಗೋ ಪಡೆದು ಯುದ್ಧಕ್ಕೆ ನಡೆದನು. ಈ ವೀರಬಾಲಕನ ಪರಾಕ್ರಮಕ್ಕೆ ಹಗೆಗಳು ಬೆರಗಾದರು. ಅವರ ದಂಡಿನಲ್ಲಿ ಹಾಹಾಕಾರವೆದ್ದಿತು. ಇಷ್ಟ ರಲ್ಲಿ ಒಮ್ಮೆಲೆ ಕಾಸೀಮನ ಮೇಲೆ ವೈರಿಗಳ ಬಾಣಗಳ ಮಳೆಯು ಸುರಿಯಿತು. ಬಾಲಕನು ಜರ್ಜರಿತನಾದನು; ಮೈಮರೆತನು. ನಂಬಿ ಗೆಯ ಕುದುರೆಯು ಸಮಯವನ್ನರಿತು ತನ್ನ ಒಡೆಯನನ್ನು ಪಾಳ ಯಕ್ಕೆ ತಂದಿತು.

ಹಜರತ ಹುಸೇನರ ಪಾಳಯದಲ್ಲಿ ಒಮ್ಮೆಲೆ ಅಳುವ ದನಿಯು ಎದ್ದಿತು. ಹುಸೇನಾಬಾನುವೂ ಸಕೀನೆಯೂ ಬಿಕ್ಕಿಬಿಕ್ಕಿ ಎದೆಎದೆ

ಬಡಿದುಕೊಂಡು ಅಳುವದನ್ನು ಕೇಳಿ ಎಲ್ಲರ ಎದೆಯೊಡೆದು ನೀರಾಯಿತು! ಪಾಳಯವೆಲ್ಲ ಕಾಸೀಮನ ಮರಣದಿಂದ ಶೋಕಸಾಗರದಲ್ಲಿ ಮುಳುಗಿ ಹೋಯಿತು!! ಆ ಕರ್ಬಲಾ ಬಯಲೆಲ್ಲ ಹಾಹಾಕಾರಮಯವಾಯಿತು!!!

"ಅರಬಿಯದ ಅಭಿಮನ್ಯು" ಅಥವಾ "ವೀರಕಾಸೀಮ" ಎಂಬ ದೀರ್ಘ ಕವಿತೆಯಲ್ಲಿ ಮೇಲ್ಕಾಣಿಸಿದ ಕಥಾಸಕದೊಳಗಿನ ಒಂದು ಚಿಕ್ಕ ಅಂಶವನ್ನು ಮಾತ್ರ ಚಿತ್ರಿಸಲಾಗಿದೆ. ಈ ಕವಿತೆಯಲ್ಲಿ ಕಿಶೋರ ಕಾಸೀಮನು ಮೊದಲಿಗೆ ತನ್ನ ಹೃದಯರಾಜ್ಯದ ಪರಿಪೂರ್ಣತೆಯನ್ನು ಕಂಡುಕೊಳ್ಳುತ್ತಾನೆ. ತನ್ನ ಅಜ್ಜಂದಿರು ಹಾಕಿದ ಧರ್ಮಪಥದಲ್ಲಿ ತನ್ನ ಅಂತಃಕರಣವು ಪೂರ್ಣ ಯಶಸ್ವಿಯಾದುದನ್ನು ಕಂಡು ಆತ್ಮಿಕ ವಿಜಯಾನಂದವನ್ನು ಉದ್ಘೋಷಿಸುತ್ತಾನೆ. ಬಳಿಕ ತಾಯಿಯೊಡನೆ ಮಾತನಾಡಿಕೊಂಡು ಅವಳನ್ನು ಒಡಂಬಡಿಸಿ ಕಾಳಗಕ್ಕೆ ಅಣಿಯಾಗುತ್ತಾನೆ. ಆಯುದ್ಧದಲ್ಲಿ ತನ್ನ ಅತುಲ ಶೌರ್ಯ ಧೈರ್ಯಗಳನ್ನು ತೋರಿಸಿ ಮೃತ್ಯುವಿನ ಎದೆಯ ಮೇಲೆ ಕೀರ್ತಿಯ ಧ್ವಜವನ್ನು ನಿಲ್ಲಿಸುತ್ತಾನೆ.

"ತನ್ನನುಳಿಸುವ ಹೇಡಿ ಉಳಿದು ಫಲವೆ?
ತನ್ನನೀಡಿದ ಕಲಿಯ ಸಾವು ನಿಜವೆ???"

———

ಮುಂದಿನ ಪುಸ್ತಕ

# ಪೂರ್ಣಯೋಗ

" ಮಧುರಚೆನ್ನ "

# ಪಥಿಕ

ನಡೆದಿಹೆನು ನಡೆದಿಹೆನು ಅಡವಿಯ ಅರಣ್ಯದಲಿ
ಮುಂಜಾನದಲಿ ನಿನಗೆ ಕಾಣದೇನು?
ಕಡುಕತ್ತಲೆಯು ಸುತ್ತು ಬಿತ್ತರಿಸಿ ಮುತ್ತುತಿಹ
ಮೊದಲೆ ಬೆಳಕನು ಕೊಡಲುಬಾರದೇನು?

ಕಂಟಿಕಲ್ಲುಗಳೆಡವುತೆಡವುತ್ತ ಮುಗ್ಗರಿಸು-
ತಿರೆ ಎತ್ತಿ ನೀ ಹಿಡಿಯಬಾರದೇನು?
ಕುಂಠಿಸಿತು ಅಸುಶಕ್ತಿ ಸೋತು ಸಣ್ಣಾಗಿರಲು
ಕೈ ನೀಡಿ ನೀ ಕರೆಯಬಾರದೇನು?

ನಿರ್ವಾಣ ನವಿಸುಖದ ಗೀರ್ವಾಣವಾಣಿಯನು
ಕೇಳ ಬಯಸುವೆ ಹೇಳಬಾರದೇನು?
ಸರ್ವ ಸಂಜೀವನದ ಸುಧೆಯ ಬಿಂದುವನೊಂದ
ಸುರಿದಮರನನು ಮಾಡಬಾರದೇನು?

ವಿಶ್ವಯಾತ್ರೆಗೆ ಹೊರಟ ದಾರಿಗನು ನಿನ್ನಲ್ಲಿ
ಶ್ರದ್ಧೆಯಿಟ್ಟರೆ ತಿಳಿಯಬಾರದೇನು?
ವಿಶ್ವಮೂರ್ತಿಯೆ ಸಕಲ ನಾನೆಂದು ಹೊರಟಿರುವೆ
ಸರ್ವ ನೀನಾಗಿ ಬರಬಾರದೇನು?

ಬೆಳಕುಕತ್ತಲೆಗಳಾ ಗುರುತು ಹತ್ತದು ಇಲ್ಲಿ
ನೆಲೆಗೆಟ್ಟು ನನ್ನನ್ನೆ ಮರೆತೆ ನಾನು
ಸುಳಿವು ದೋರದೆ ನೀನು ನನ್ನಲ್ಲೆ ಅವಿತಿದ್ದು
ನನ್ನ ಮರೆವುದು ನಿನಗೆ ಉಚಿತವೇನು?

ಮರಬಳ್ಳಿ ಬಳಕುವವು ತುಳುಕುವವು ತೂಗುವವು
ನೀ ಕಣ್ಣು ತೆರೆದಿರಲು ಮಕರಂದವು
ಸ್ವರಸಂಪು ಇಂಪು ಇಂಚರ ಹಕ್ಕಿಗಳ ಹಾಡು
ಎಲ್ಲೆಲ್ಲಿ ಹೊಮ್ಮುವದು ಆನಂದವು.

ನಡೆನಡೆದು ದುಡಿದುಡಿದು ನಿನ್ನಿಂದೆ ಪಡೆಪಡೆದು
ನಿರ್ಮಿಸುವೆ ಉಪವನವ ನೋಡು ನೀನು
ಸಡಗರದ ನಂದನದ ಬನಸಿರಿಯು ಸೌರಭವ
ಸವಿಸವಿದು ಹರಕೆ ಕೊಡಬಾರದೇನು?

ಅಲೆದಲೆದು ಅರಸಿದರು ಲಭಿಸಲಾರದ ಕುಸುಮ
ನೀನಾಯ್ದು ನನಗೆ ಕೊಡಬಾರದೇನು?
ನಲಿನಲಿದು ಆ ಹೂವ ಹಾರ ಮಾಡುವೆ ನಿನಗೆ
ನಿನ್ನ ಹೂ ನೀ ಮುಡಿಯಬಾರದೇನು?

# ವಸಂತನ ಮರೆ

ಸಂತಸದ ಸಾಗರದಿ ಶರಶೂರೆ ಸರಸಾಟ
ನೆಲಕಿಷ್ಟು ಸಿರಿಯು ವಾಸಂತದಲ್ಲಿ
ಅಂತವಿಲ್ಲದ ಇಂಥ ಶುಭದ ಸಂತೆಯು ಕೂಡ
ಹರಿಯುವದು ಕೊನೆಗೆ ಮಳೆಗಾಲದಲ್ಲಿ

ಧೊರೆಯ ಭಯ ಅಲ್ಲಿಲ್ಲ ಹಿರಿಯರಂಜಿಕೆಯಿಲ್ಲ
ಋತುರಾಜ ವಾಸಂತ ಕಾಲದಲ್ಲಿ
ಕೊರತೆಯಿಲ್ಲದ ಸುಖವ ಬಡವಬಲ್ಲಿದರೆಲ್ಲ
ಸುರಿಯುವರು ಆ ಸೊಗದ ಸುಗ್ಗಿಯಲ್ಲಿ

ಸುರಿದ ಸೊಬಗಿನ ಸೊಂಪು ಮರಬಳ್ಳಿಗಳ ತಂಪು
ಪೂಗಂಪು ಸರಸ ಸುಳಿಗಾಳಿಯಲ್ಲಿ.
ಸ್ವರಬಿಚ್ಚಿ ಹಾಡುತಿಹ ಕೋಗಿಲೆಯ ದನಿ ಇಂಪು
ನಂದನದ ಸೌಂದರ್ಯಸಾರದಲ್ಲಿ

ಕಾರಹುಣ್ಣಿಮೆ ಬರಲು ಕಾರ್ಮೋಡಪಡೆ ಕವಿದು
ಬಿರುಗಾಳಿ ಭರಭರನೆ ಬೀಸಿಬೀಸಿ
ಸೂರೆಗೊಂಡವು ಬನದ ಸಿರಿಯ ಸಿಂಗಾರವನು
ಗುಡುಗು ಸಿಡಿಲುಗಳಾಗ ರಾಶಿರಾಶಿ

ಹೊಸಹೊಸದು ಹೊಂಬಣ್ಣ ಕೆಂಬಣ್ಣ ಹೂವುಗಳು
ಮರೆಯಾದವೆಂದು ನಾವರಚಲೇಕೆ?
ಕಸುಕಾಗಿ ಹಣ್ಣಾಗಿ ವಾಸಂತ ಕುವರನಿಗೆ
ಮೊಲೆಗೊಡಲು ಬರುತಿರಲು ಚಿಂತೆಯೇಕೆ?

ಮರೆಯಾದನೆನಬೇಡ ಹುರಿಯಾಗಿ ಬರುತಿಹನು
ತಿರುತಿರುಗಿ ವರುವರುಷದಾದಿಯಲ್ಲಿ
ತೆರೆಯುಮರೆ ಸೇರಿದರು ಚಿರಜೀವಿ ತಾನಾಗಿ
ಮಗುಮಗುಳಿ ಮೆರೆಯುವನು ಲೋಕದಲ್ಲಿ

ಹುಟ್ಟಿದ್ದು ಸಾಯುವದು ಸತ್ತುದ್ದೆ ಹುಟ್ಟುವದು
ಬ್ರಹ್ಮಾಂಡ ಚಕ್ರವಿದು ತಿರುಗಿ ತಿರುಗಿ
ಸೃಷ್ಟಿಯಲಿ ಸಕಲವೂ ಮೂಡುವದು ಮುಸುಳುವದು
ನೂರೆಂಟು ಸಲ ಹೀಗೆ ಕರಗಿ ಕರಗಿ.

---

# ಬೇರೊಂದು ಬಾಯಾರಿಕೆ

ಬಾವಿಕೆರೆ ಹೊಳೆಹಳ್ಳ ಕುಂಟೆಕಾಲುವೆ ನೀರ
ಕುಡಿಕುಡಿದು ಸಾಕುಸಾಕಾಯಿತೆನಗೆ
ಯಾವ ಹೊಂಡದೊಳಿಳಿದು ಎಷ್ಟು ಈಂಟಿದರು ಸಹ
ತೀರಲಾರದ ತೃಷೆಯು ಒಳಗೆ ಒಳಗೆ

ಒಮ್ಮೆ ಕುಡಿದರೆ ಸಾಕು ತಿರುಗಿ ತೃಷೆ ತಾನೆಂದು
ಸುಳಿಯಬಾರದು ಜೀವಶುಕದ ಮುಂದೆ
ಒಮ್ಮೆಯಾದರು ಇಂಥ ಅಮರಗಂಗೆಯ ಜಲವ
ಸವಿಯಬೇಕೆಂದು ಕಂಗೆಟ್ಟು ಬಂದೆ.

ಬಾಯಾರಿ ತೊಳಲಿಬಳಲುವೆ ನೀರು ನೀರೆಂದು
ಒಂದು ಹನಿಯೂ ಕೂಡ ಕಾಣಲಿಲ್ಲ.
ವಾಯುವೇಗದಿ ಬಂದೆ ಸಪ್ತಸಾಗರಸುತ್ತಿ
ಬತ್ತಿಹವು ಚೆಲುವಾದ ಸೆಲೆಗಳೆಲ್ಲ.

---

# ವಿರಹ

ಕಾಣಬಾರದೇನೊ ಕಣ್ಣಿಗೆ
ತಾಣವಾವುದೆನ್ನ ಆಸೆಗೆ.
ಕುಕ್ಷಿಗಾಗಿ ಭಿಕ್ಷೆ ಬೇಡದೆ
ರಕ್ಷಣಕ್ಕೆ ಕಯ್ಯ ನೀಡಿದೆ.

ಅಂತರಂಗದಮಲ ಬೆಳಕಿಗೆ
ಅಂತರಾಳವೆಲ್ಲ ಹಸಿದಿದೆ.
ಕಣ್ಣತುಂಬ ಮೋಡ ಮುಸುಕಿದೆ
ಕಣ್ಣಗೊಂಬೆ ಕುಗ್ಗಿ ಕುಸಿದಿದೆ.

ಪ್ರಳಯದಗ್ನಿ ಒಳಗೆ ಅಡಗದೆ
ಜ್ವಲಸಜ್ವಾಲೆ ಧೂಮವೆದ್ದಿದೆ.
ಪ್ರಳಯವಾಯು ಬೀಸತೊಡಗಿದೆ
ಪ್ರಲಯಜಲಕೆ ಉಕ್ಕು ಬಂದಿದೆ.

ಮಿಣುಕು ಜ್ಯೋತಿ ಆರಲಾರದೆ?
ಜಿಣುಕಿ ಮಿಣುಕಿ ಬಾಳಬಲ್ಲದೆ?
ಕಾಣಬಾರದೇನೊ ಕಣ್ಣಿಗೆ
ತಾಣವಾವುದೆನ್ನ ಆಸೆಗೆ?

———

# ಮರವಿನ ಮನವೆ!

ಗುರುದೇವನ ಕೃತಿ ಸೃಷ್ಟಿಯು ।
ಹಿರಿದಾದುಪಕಾರ ಮನುಜ ಜನ್ಮದ ಮೇಲೆ ॥
ಮರೆವುದು ಥರವಲ್ಲೆಚ್ಚರ-
ಏರಿಸಲೆ ನೆನಪಿಲ್ಲವೇನು ಮರವಿನ ಮನವೇ ॥

ಮಾಡಿದ ಗರ್ಭದಿ ಪಾಲನ ।
ದೂಡಿದ ಕಡುಕಷ್ಟ ದುಃಖ ವೇದನೆಗಳನು ॥
ನೀಡಿದ ಮೊಲೆವಾಲ್ಧಾರೆಯ ।
ಗೂಢವು ನೆನಪಿಲ್ಲವೇನು ಮರವಿನ ಮನವೇ ॥

ತಾರಾಗಣ ರವಿ ಚಂದ್ರಮ ।
ಭೂರುಹ ಜಲ ವಾಯು ಭೋಗ ಭಾಗ್ಯವ ನಿನಗೆ ॥
ಏರಿಹ ಸಂಪತ್ಸಾಗರ ।
ತೂರಿದ ನೆನಪಿಲ್ಲವೇನು ಮರವಿನ ಮನವೇ ॥

ಮನುಜನ ಮಾಡಿದ ನಿನ್ನನು ।
ಘನತರ ಕೃತಿ ನಿನ್ನ ಕರದಿ ಜರುಗಲಿಯೆಂದು ॥
ಘನಮಹಿಮಾತ್ಮನ ನಾಮವ ।
ನೆನೆಯಲೆ ನೆನಪಿಲ್ಲವೇನು ಮರವಿನ ಮನವೆ ॥

---

# ಪೂರ್ಣತೆ

ನೀಲವರ್ಣದ ಮುಗಿಲು ಮೋಡಗಳ ಸುಳಿಯಿಲ್ಲ
ತಿಳಿಬೈಲು ಸೊಗಸು
ನಾಲ್ದೆಸೆಗೆ ಹಸರು ಕುಸುರಿನ ಧರುಣಿ ಕಣ್ತುಂಬ
ಕಂಡರಳಿ ಮನಸು

ಸ್ವರದೆಗೆದು ಹಾಡಿದೆನು ಸ್ವರವೇರಿ ಸುಳಿಯುತಿದೆ
ಗಿರಿಗಗನದಲ್ಲಿ
ಗಿರಿಯ ಶಿಖರದ ಮೇಲೆ ನಿಂತಿರುವೆ ಅರಳುತಿವೆ
ಮಲ್ಲಿಗೆಯು ಅಲ್ಲಿ

ಕೇಳುತಿದೆ ಅಲ್ಲೊಂದು ನಾದ ಗಗನಾಂಗಣದ
ಕೊನೆದಂಡೆಯಲ್ಲಿ
ಕೇಳಿದೆನು ಕಿವಿಗೊಟ್ಟು ಮನಸಿಟ್ಟು ಬಗೆಸೆಟ್ಟು
ಹಿರಿಯಾಶೆಯಲ್ಲಿ

ನೆನೆನೆನೆದು ತಿರುತಿರುಗಿ ನಾದನಾವೀನ್ಯವನು
ಬಲು ಬೆರಗುಗೊಂಡು
ಮನಮರುಗಿ ಹರಿಯುತಿದೆ ಬೆರೆಯಬೇಕೆಂಬಾಸೆ
ಒಳಗುಕ್ಕಿ ಬಂದು

ಗಿರಿಯಲ್ಲಿ ಝರಿಯಲ್ಲಿ ದರಿಯಲ್ಲಿ ತುಳುಕುತಿದೆ
ಸುಳಿಗಾಳಿಯಲ್ಲಿ
ಧರೆಯೆಲ್ಲ ತೇಲುತಿದೆ ಮುದುವಾಗಿ ಅಲೆದಲೆದು
ಆ ನಾದದಲ್ಲಿ

ಹೃದಯಮಂಟಪದಿಂದ ಹಾರುತೇರಿತು ಮೇಲೆ
ಹಿರಿಹಕ್ಕಿಯೊಂದು
ಮದವೇರಿ ಮೈಮರೆದು ತೂರಿಸೆಗೆಯಿತು ವಿರಹ
ನೆರೆ ಉಕ್ಕಿ ಬಂದು

ಬಹುದಿನದ ಅಗಲಿಕೆಯ ಅಂತರವು ತಾನಳಿದು
ಸಲೆ ಮಾಯವಾಯ್ತು
ಬಹುಕಾಲದಾ ಆಸೆ ಹೊಮ್ಮಿ ಹೊಂದಿಕೆಗೂಡಿ
ಪರಿಪೂರ್ಣವಾಯ್ತು

---

# ಕಂಡೆ

ಬಿರಿಬಿರಿದ ಬಕುಲ ಪರಿಮಳ ಸೂಸಿಹೆಲ್ಲಿ
ಹರವಿರುವ ಹಾಲ್ಬೆಳ್ಳಿ ಬೆಳದಿಂಗಳಲ್ಲಿ
ತರುಲತೆಯ ಕಿರುಶಬ್ದ ಸುಳಿಗಾಳಿಯಲ್ಲಿ
ಮರಿಕೋಗಿಲೆಯ ಕೂಗು ಮಧುರಧ್ವನಿಯಲ್ಲಿ

ಝರಿಯೊಂದು ಚಿಮ್ಮುತಿದೆ ಗಿರಿಶಿಖರದಲ್ಲಿ
ದರಿಯಲ್ಲಿ ಹರಿಯುತಿದೆ ಬಹುದೂರದಲ್ಲಿ
ಹರವಿಕೊಂಡಿದೆ ಹಸರು ಧರಣಿಯಲ್ಲಿ
ಸುರರಿಗೀ ಸುಖವಿಲ್ಲ ಸುರಲೋಕದಲ್ಲಿ

* * * *

ಸವಿಗಾರನಗಲಿಕೆಗೆ ಬಿರಿಬಿರಿಯುತಿತ್ತು
ಸವಿಯೆಲ್ಲ ಕಹಿಯಾಗಿ ತೋರುತಿತ್ತು
ಸುಳಿಗಾಳಿ ಬಿಸಿಯುಸಿರ ಸೆಲೆ ಕಾರುತಿತ್ತು
ತಿಳಿಗಣ್ಣು ಕಳೆಹೀನವಾಗಿ ಕುಳಿತಿತ್ತು

* * * *

ಮಿಂಚೊಂದು ಮಿಂಚಿ ಆ ಕ್ಷಣ ಮಾಯವಾಯ್ತು
ಮಿಂಚಿನಲಿ ಸವಿಗಾರನನು ಕಂಡುದಾಯ್ತು
ತೋರುತಿಹುದೆಲ್ಲ ಜಗ ಗುರುರೂಪದಲ್ಲಿ
ಬೀರುತಿದೆ ಅಸುಕಾಂತಿ ಜಡಸೃಷ್ಟಿಯಲ್ಲಿ

---

# ಕವಿ

ಸೌಂದರ್ಯಸರಸಿಯೊಳು ಕಮನೀಯ ಸುಕುಮಾರ
ಸಿರಿರಾಜಹಂಸವಾಗಿ
ಇಂದು ಮೂಜಗ ಮೀರಿ ಅಮರ ಗದ್ದುಗೆ ಏರಿ
ಆಳ್ವ ಅಧಿಕಾರಿಯಾಗಿ

ಋತುರಾಜ ನವತರುಣ ಮಧುವನದ ಅಭಿರಾಮ
ಮೃದು ಮಂದವಾಯುವಾಗಿ
ಅತಿರೂಪಲಾವಣ್ಯ ಅರೆದೆರೆದು ಬಿರಿಬಿರಿದ
ಅರಳು ಹೂದುಂಬಿಯಾಗಿ

ಸುರಗಂಗೆ ತೆರೆಯಾಗಿ ಕೊಚ್ಚಿಕೊಳ್ಳುವೆ ಪಾಪ
ಹರಿದು ಪಾತಾಳ ಮುಟ್ಟಿ
ಮೆರೆವ ಕವಿಕುಲಕುಮುದ ಗರ್ಭಸ್ಥ ನಿತ್ಯಸುಧೆ
ಸುರಿಸುರಿಸಿ ಧಾರಿಗಟ್ಟಿ

ಮಕರಂದ ಶರಸೂರೆಯಾಗಿರುವ ಮೃದುಮೃದುಲ
ಕುಸುಮ ನಲಿಸಲಿಯುವಲ್ಲಿ
ಸುಕುಮಾರ ಒಳ್ಳಿಮಂಟಪದಲ್ಲಿ ಅಡಗಿ ಮೈ
ಮರೆವೆನಾನಂದದಲ್ಲಿ

ಮುಸ್ಮಸ ಮಹಾಸಿಂಧು ತಳತನಕ ಮುಳುಗುವೆನು
ಮುತ್ತುರತ್ನಂಗಳಲ್ಲಿ
ಜನ್ಮಜನ್ಮದ ವಿಪುಲ ಭೋಗಭಾಂಡಾರವನು
ಒಡೆಯುವೆನು ಯೋಗದಲ್ಲಿ

ರವಿಯ ರಥವನ್ನೇರಿ ವಿಶ್ವಭ್ರಮಣವ ಮಾಡಿ
ನಗುವೆನಾ ಆಡಿ ಹಾಡಿ
ಸವಿಸುಖದ ಕಲ್ಪನಾಕಾಶದೊಳು ಹಾರುವೆನು
ಮೋಡಗಳ ಜೋಡಿಗೂಡಿ

ಸುರಸ್ವರ್ಗಲೋಕದಾ ಅಮರದೂತನು ನಾನು
ನನಗಿಲ್ಲ ಆಹುದು ಬಹುದು
ತ್ರಿಕರಲಿ ತಿರುಗಿದರು ರಾಜರ್ಷಿ ಬ್ರಹ್ಮರ್ಷಿ
ದೇವರ್ಷಿ ನಾನೆ ಹೌದು

ಚಿರಗಾನ ಲಹರಿಯಲಿ ಸಿರಿಬೆಡಗ ಬೆರಸುತಲಿ
ಬೆಳಸುವೆನು ಭಾವವನ್ನು
ಅರಿಯಲಾರದ ಗೂಢ ಗೀತೆಯಲಿ ಹಾಡುವೆನು
ಭುವನದಲಿ ಸ್ವರ್ಗವನ್ನು

ಝುರಿಯಲ್ಲಿ ಬೆರೆಯುವೆನು ಸೇರುವೆನು ಹೂವಿನಲಿ
ನಲಿನಲಿದು ಬಾಳುತಿರುವೆ
ಬರಿಬಯಲಿನಾಕಾಶದುಡಿಯಲ್ಲಿ ಹೊಡಕರಿಸಿ
ಹಕ್ಕಿಯೊಲು ಹಾಡುತಿರುವೆ

---

# ಅಂತರಾರಾಮ

ಹೃದಯುದಾಕಾಶವಿದು ಅದುರಿ ಗಡ ಗದ್ಗರಿಸಿ
ಪ್ರೇಮುವಂಕುರಿಸಿ ಸೌರಭವು ಹಾರಿ
ಭೇದಿಸುತ ಸಪ್ತತಲ ಇಂದ್ರಚಂದ್ರರ ಲೋಕ
ಪಾರ ಅಪರಂಪಾರ ದೂರ ಸೇರಿ

ಆವ ಲೋಕವ ಕಾಣೆ–ದಿವ್ಯಜ್ಯೋತಿಯು ಕಂಡೆ
ಕಣ್ಣರಳಿ ಬಂತಾಗ ಭವ್ಯದೃಷ್ಟಿ
ಆವ ಆಶೆಯು ಪಾಶವೆಸಗಿಲ್ಲ ಬಿರುಗಾಳಿ
ಬೀಸಿ ಸೂಸಿತು ಈ ಪ್ರಕಾಶವೃಷ್ಟಿ

ಸಲ್ಲಸಲ್ಲೆಯು ಪ್ರೇಮ ಬಲ್ಲೆನೆಂಬುವ ಬಿರುದು
ಹದಿನಾಲ್ಕು ಲೋಕಕ್ಕೆ ತಟ್ಟಿಮುಟ್ಟಿ
ಎಲ್ಲೆಡೆಗೆ ವ್ಯಾಪಿಸಿತು ಬೆಳ್ಳಬೆಳು ಬೆಳಕಾಗಿ
ನನ್ನಲ್ಲೆ ಆ ಕಳೆಯು ಪೊಳಕೆ ಹುಟ್ಟಿ

ಉರಿದುರಿದು ಉರಿದೆದ್ದ ಆ ಊರ್ವೆಯುರಿಯಲ್ಲಿ
ಒಂದಾಗಿ ಸತ್ಯದಾ ಸವಿಯುಸುಂಡೆ
ಸುರರು ಸುರಗುರು ಸೂರ್ಯಚಂದ್ರರೂ ಕಾಣದಾ
ಬೆಳಕಿನುನ್ಮಾದದಾ ಕಾಂತಿ ಕಂಡೆ

ಪ್ರೇಮದಾಶೆಯು ಊರ್ಮಿ ಪ್ರೇಮಕ್ಕೆ ಬೀಜವದು
ಪ್ರೇಮದಾ ಫಲವಾಗಿ ಫಲಿಸಿ ನಿಂದು
ಉನ್ಮೀಳಿಸಿ ತನ್ಮಯತೆ ಪಾವಿತ್ರ್ಯ ಪರವಶತೆ
ಪರದೆಗಳ ಹರಿಹರಿದು ಸುಳಿದು ಬಂದು

ವೇದಶಾಸ್ತ್ರಪುರಾಣ ವರ ಕುರಾನಗಳೆಲ್ಲ
ಕುಣಿಕುಣಿದು ನನ್ನ ಊರ್ಮಿಯೊಳೆ ಹುಟ್ಟಿ
ಅಡಗಿಹವು ಇಡಗಿಹವು ಎಲ್ಲೆಡೆಗೆ ನುಡಿಯುವವು
ಊರ್ಮಿಕೂರ್ಮಿಯೆ ಭವ್ಯದಿವ್ಯ ಸೃಷ್ಟಿ

ಮರವು ಮತ್ಸರ ಕರಗಿ ಕಷ್ಟನಷ್ಟವು ಸುಟ್ಟು
ಭರದಿ ಭಸ್ಮೀಭೂತವಾಗಿ ಹಾರಿ
ಆರವು ಅಗಲಾಗಿ ಅದ್ಭುತದ ಅಘಟಿತ ಶಕ್ತಿ
ಹೊಡಕರಿಸಿ ಹೊಳೆದು ಕುಡಿಮಿಂಚುದೋರಿ

ಘನಸಿರಿಯ ಚಿನ್ಮಯ ಚಿದಾನಂದವನು ಕಂಡೆ
ಹೊರಮರೆದು ಒಳ ಊರ್ಮಿ ಕುದುರೆ ಏರಿ
ನೆನಪುದೋರಿತು ಇತ್ತ ಕನಸು ಹರಿಯಿತು ಅತ್ತ
ಹತ್ತುತಾಸಿನ ಹಿಗ್ಗು ಹಾಡನೇರಿ

———

## ಸಾವು ಹೂವು

ನಾನು ನನ್ನಸು ತೊರೆದೆ
ಧ್ಯಾನ ಗಾನದಿ ಬೆರೆದೆ
ಭಾನವೇರಿತು ಹರಿದು ಸಕಲ ಪರದೆ
ಭಾವಭಕ್ತಿಯು ಭರದೆ
ಜೀವ ಅರ್ಪಿಸಿ ಕರೆದೆ
ಸಾವುನೋವಿನ ತಡೆಯನೊಡೆದು ಮೆರೆದೆ

ಆತನಾಡುವ ಲೀಲೆ
ಭಿತ್ತಿಯಿಲ್ಲದ ಶಾಲೆ
ಮಾತು ಮೌನದ ಜ್ವಾಲೆ ಬೆಳಕಿನೋಲೆ
ತಿಮಿರ ಚಕ್ರದ ಮೂಲೆ
ಸಮರ ಸಾಧನ ಶಾಲೆ
ಅಮರರಾಳಿಕೆಯಲ್ಲಿ ಅಲ್ಲಿ ಸೋಲೆ?

ಯಂತ್ರದೊಳಗಿನ ಅಸುವು
ಮಂತ್ರವೋಡಿಯು ಹಾವು
ಅಂತರಂಗದೊಳದುವೆ ಅಮರ ಶಿಶುವು
ಎಲ್ಲರಂಜಿಪ ಸಾವು
ಬಲ್ಲದವರಿಗೆ ಬೇವು
ಬಲ್ಲವರಿಗೇನುಂಟು ಸಾವುಹೂವು

———

# 'ಅರಬಿ'ಯದ ಅಭಿಮನ್ಯು

( ವೀರಕಾಶೀವು )

ಭಾವದಲ್ಲಿ:—

"ಅಸವು ಆಶಾಪಾಶ ಹರಿದುಬಿಟ್ಟೆ
ವಿಷವು ವಾಸನೆಗಳನು ಸುಟ್ಟುಬಿಟ್ಟೆ

ಈಶ ಕೋಪದ ಕತೆಯು ಬಲ್ಲೆ ನಾನು
ಈಶ ಕರುಣೆಯು ಮಹಿಮೆ ಅರಿತೆ ನಾನು

ಜಯಿಸಿ ಇಂದ್ರಿಯಗಳನು ವಶಕೆ ತಂದೆ
ಜಯಶೀಲನಾದೆನು ತಪಸಿನಿಂದೇ

ಅರುವಿನಸ್ತ್ರದಲಿ ಭವಪಾಶ ಹರಿದೆ
ಪರಮಪುರುಷಗೆ ಮೆಚ್ಚಿ ಎಲ್ಲ ತೊರೆದೆ

ಸುಖದುಃಖದಾ ತೆರೆಗೆ ಬೆದರಲಾರೆ
ಸುಖಶಾಂತಿಗಳ ಸವಿಗೆ ತೊಳಲಲಾರೆ

ಘನ್ನ ಬೆಸಿಕೆಯ ಜೀವ ದೇಹ ಕಂಡೆ
ಭಿನ್ನವಾಗಿಹವೆಂದು ಕಂಡುಕೊಂಡೆ

ನಿಂದೆ ಅವಮಾನ ಜಯವೊಂದೆಯೆಂದೆ
ಅಂದು ಮುಂದಿನ ಎಣಿಕೆ ಯಾತಕೆಂದೆ

ಕಮಲದೊಲು ನಿರ್ಲಿಪ್ತನಾದೆ ನಾನು
ವಿಮಲ ಪ್ರಭೆಯನು ಒಳಗೆ ಕಂಡೆ ನಾನು

ಲೋಕ ವಿಷಯದ ರಾಶಿ ವಿಷ ತೋರುತಿಹುದು
ನಾಕ ನರಕದ ಭಯವು ಕಸತೋರುತಿಹುದು

ಶತ್ರುಮಿತ್ರರ ಸೀಮೆ ದಾಟಿ ನಿಂತೆ
ಛತ್ರಚಾಮರದಾಶೆ ಮರೆತು ನಿಂತೆ

ಕಷ್ಟಸಂಕಟಗಳಿಗೆ ಕೈಮಾಡಿ ಕರೆದೆ
ನಷ್ಟನಿಷ್ಠುರಗಳಿಗೆ ಮೈಗೊಟ್ಟು ಪೊರೆದೆ

ಮರೆಯಲಾರೆನು ಪೂರ್ವ ಪಾಪಗಳನು
ಮರೆಯಲಾರೆನು ಪರರ ತಾಪಗಳನು

ಜಗದ ನಿಃಸ್ಸಾರತೆಯು ಕಯ್ಯ ಕನ್ನಡಿಯು
ಬಗೆಯ ಭಂಗುರತೆಯೂ ಕಂಡ ನೆಲೆಯು

ಪರಮಾತ್ಮನೇ ಪರಮ ಗುರುವು ತಾನು
ಪರಮನಾಜ್ಞೆಯೇ ಸರಗೆ ನೆಲೆಯು ತಾನು

ಪರರಿಗುಪಕಾರ ಮಾಡಿದ್ದು ಮರೆವೆ
ಹಿರಿಹಾನಿ ಮಾಡಿದನ ಮರೆತು ಬಿಡುವೆ

ಕನಕಸಿರಿ ಕಸದಂತೆ ಕಂಡೆ ನಾನು
ಜನಪತಿಯ ವೈಭವವ ಬಯಸೆ ನಾನು

ಸತ್ಯಸುವಿಚಾರ ಜ್ಞಾನದಲಿ ಹಾರುತಿಹೆ
ನಿತ್ಯನಿರ್ಮಲ ಅನಂತದಲಿ ಆಡುತಿಹೆ

ನಾ ನಿನ್ನ ಶಿಶುವೆಂಬ ಗರ್ವವಿಹುದು
ನಾನೆಂಬಹಂಕಾರ ಕರಗಿರುವದು

ಹೀನ ಜನ ದೀನ ಜನ ಬಳಗ ಬಂಧು
ಮಾನಾಭಿಮಾನವನು ನೋಡೆನೆಂದು

ಮೇರುಗಿರಿಯಂಥ ದೃಢ ಭಕ್ತಿಯಿಹುದು
ಮೂರು ಲೋಕವೆ ಭಾವದಲ್ಲಾಡುತಿಹುದು

ಲೋಕ ಕಿಂಕರನಾಗಿ ಬಾಳುತಿರುವೆ
ಲೋಕದಲಿ ತ್ಯಾಗವನು ಸಾರುತಿರುವೆ

ಸುಳಿಯಲಾರದು ಸ್ವಾರ್ಥ ಸನಿಹದಲ್ಲಿ
ಅಳುಕಲಾರದು ಚಿತ್ತ ಕನಸಿನಲ್ಲಿ

ದಿವ್ಯ ಸಭದಂತೆ ನಿಸ್ಸೀಮನಾಗಿರುವೆ
ಭವ್ಯ ಕಡಲಂತೆ ಗಂಭೀರನಿರುವೆ

ಕುಲಗೋತ್ರ ಬಂಧುಗಳ ಬಂಧನವು ಬೇಡ
ಚಲವಿಚಲ ವಸ್ತುಗಳ ದುಃಖ ಬೇಡ

ಕ್ರೋಧಲೋಭವ ಬೆಂಕಿ ನಂದಿರುವುದು
ಭೇದಬೋಧದ ಬೂದಿ ಹಾರುತಿಹುದು

ಆರು ವೈರಿಗಳನ್ನು ತುಳಿದು ನಿಂದೆ
ಮೂರು ಬಾಧೆಗಳನ್ನು ದಾಟಿ ಬಂದೆ

ಸಂಕಟದ ಸೈನ್ಯವನು ಮೆಟ್ಟಿ ಚದರಿಸಿದೆ
ಕೊಂಕುಕುಟಿಲತೆಗಳನು ಕುಟ್ಟಿ ಓಡಿಸಿದೆ

ಸಾಧಿಸಿದೆ ಕಾರ್ಯವನು ಕರ್ತವ್ಯದಲ್ಲೀ
ಬೋಧಿಸುವೆ ಸ್ವಾವಲಂಬನದ ಮೇಲ್ಮೆ

ತಡೆಯದೈ ಕಣ್ಣೀರು ಪರದುಃಖ ನೋಡಿ
ಹಿಡಿದು ಪೀಡಿಸೆಸು ಜೀವಿಗಳ ಕಾಡಿ

ಗುರುವಚನ ಲೀಲೆಯಲಿ ಲೋಲನಿರುವೆ
ಕರುಣೆಯನು ಕರುಳಲ್ಲಿ ತುಂಬಿಕೊಂಡಿರುವೆ

ದಾರಿದ್ರ್ಯದಾಸ ಬಾಧೆಗಳನ್ನು ಗಣಿಸೆ
ಘೋರತರ ಸಂಕಟಗಳನ್ನು ಎಣಿಸೆ

ನಿಂದೆ ನೀಚತ್ವಗಳ ಪೀಡೆ ಸಹಿಸಿ
ಬೆಂದು ಪರಿಪಕ್ವತೆಯ ಫಲವ ಗಳಿಸಿ

ಪರಮನಾಜ್ಞೆಯ ನಾನು ಅರಿತುಕೊಂಡೆ
ವರ ಸೇವೆಯಾ ಮಾರ್ಗ ಕಲಿತುಕೊಂಡೆ

ಪರರ ಮನ ಮುರಿದು ಅನ್ಯಾಯ ಮಾಡಿ
ದೊರಕಿಸಿದ ಅನ್ನವನು ದೂರ ನೋಡಿ

ಅನ್ಯಾಯದಾಟಕ್ಕೆ ಜೀವ ಹೇಸಿ
ಮಾಸ್ಯಮಾರ್ಗವ ಹಿಡಿದೆ ಸೋಸಿ ಸೋಸಿ

ಜೀವ ಜಾಲಕ್ಕೆಲ್ಲ ದಾರಿ ಹಿಡಿಸಿ
ಸಾವು ನೋವಿನ ತೊಡಕನೆಲ್ಲ ಬಿಡಿಸಿ

ಕಷ್ಟನಷ್ಟ ವಿರೋಧಗಳ ದೂರಗೊಳಿಸಿ
ಸುಸ್ಫುಟತರ ಶಾಂತಿಸುಖ ಪ್ರೇಮ ಬೆಳಿಸಿ

ಬಲವಾಯ್ತು ವಾಣಿ ತಾ ನುಡಿದು ನಡೆದು
ಛಲವಳಿದು ನೆಲೆ ತಿಳಿದು ಫಲವ ಪಡೆದು

ಪರರ ನೋಯಿಸಿ ನಿಂದೆ ಹಿಂದಾಡಲಿಲ್ಲ
ನೆರೆಹೊರೆಯರೆದುರು ಪೌರುಷ ಹೇಳಲಿಲ್ಲ

ಕೆಟ್ಟನಡಿ ವೈರಿಗೂ ನುಡಿಯಲಿಲ್ಲ
ಕೊಟ್ಟರೂ ರಾಜ್ಯ ಸುಳ್ಳಾಡಲಿಲ್ಲ

ಕಾಣುವೆನು ಪ್ರೇಮವನು ಕಾಡುವವರಲ್ಲಿ
ಕಾಣುವುದು ಪರದುಃಖ ತಿಳಿಗಣ್ಣಿನಲ್ಲಿ

ಅಡಗದೈ ಸೌಂದರ್ಯ ರೂಪದೃಷ್ಟಿ
ಅಡಗಿಕೊಂಡಿದೆ ಕಣ್ಣಿನಲಿ ಪೂರ್ಣಸೃಷ್ಟಿ

ಏರುತೇರುತ ಸಪ್ತಗಗನದಲ್ಲಿ
ಸೇರುವದು ಗುರುಚರಣ ಜ್ಯೋತಿಯಲ್ಲಿ

ಪರರ ಆಪತ್ತು ಅನ್ಯಾಯ ಕಂಡು
ತಿರುಗೆ-ನೆಂದೆಂದು ನಾ ಸಹಿಸಿಕೊಂಡು

ಪಾತಕದ ಪಂಕದಲಿ ಬೀಳದಂತೆ
ಆತ್ಮದಲಿ ಎಚ್ಚರಿಕೆ ತುಂಬಿ ನಿಂತೆ

ಜ್ಞಾನದಯೆಗಳ ಸ್ಥೈರ್ಯ ಸಿದ್ಧವಿಹುದು
ವಿನಯ ತಾಳ್ಮೆಗಳ ಸಿಡಿ ಮದ್ದು ಇಹುದು

ಆತ್ಮರಾಜ್ಯದ ಅರಸನೇ ನಾನು ಇರುವೆ
ಆತ್ಮದಾನಂದಕ್ಕೆ ಬಾಧ್ಯನಿರುವೆ

ಸೇವಕರ ಸೇವಕನು ನಾನಾಗಬೇಕು
ಯಾವ ಭೂಷಣ ಬೇಡ ಜ್ಞಾನ ಸಾಕು

ಅರಮನೆಯು ಗದ್ದುಗೆಯು ಬಯಸಲಾರೆ
ಇರಲಿ ಗುಡಿಸಲವಿದನೆ ಮರಿಯಲಾರೆ

ರತ್ನಮಾಣಿಕ ತೊರೆದೆ ಕಸಕೆ ಬಗೆದು
ಆತ್ಮರತಿಯೊಂದೆ ಆಭರಣವಿಹುದು

ತಪಜಪಾದಿಗಳಲ್ಲಿ ನಿಷ್ಕಾಮನಿರುವೆ
ಉಪವಾಸದಲ್ಲಿ ಫಲ ಕಾಣುತಿರುವೆ

ಸ್ವಾರ್ಥ ಸೇವೆಯು ಬಾಳು ಶುನಕಸಂತೆ
ವ್ಯರ್ಥವಾಗಿಹುದಯ್ಯ ಕಾಡುಸಂತೆ

ಕೆಳಗಿಳಿಯಲಾರೆ ಭವಕೂಪದಲ್ಲಿ
ತಿಳಿದು ತೇಲಾಡುತಿಹೆನಂತರಂಗದಲ್ಲಿ

ದೋಷಗಳ ನಾನೆಣಿಸೆ ಸತ್ಯರಲ್ಲಿ
ಮೋಸ ಮೋಹವ ಕಾಣೆ ನಿತ್ಯರಲ್ಲಿ

ಕಷ್ಟಸಂಕಟಗಳನು ತುಳಿದಾಡುತಿರುವೆ
ಶ್ರೇಷ್ಠರಾಚರಣದೊಳು ಹೊರಳಾಡುತಿರುವೆ

ಹೇಸಿ ಹೆಣ್ಣಿಗೆ ಹಣಕೆ ಕಣ್ದೆರಿಯಲಾರೆ
ವಾಸನೆಗೆ ವಶನಾಗಿ ಮಣ್ ಮುಟ್ಟಲಾರೆ

ಹಿಂಸೆ ಎಂದೆಂದು ಮೂಡದು ಭಾವದಲ್ಲಿ
ಸಂಶಯವು ಸುಳಿಯದೈ ಬುದ್ಧಿಯಲ್ಲಿ

ಸುಖದುಃಖ ಲೆಕ್ಕಿಸದ ಶಿಶುವು ನಾನು
ಸಕಲಬ್ರಹ್ಮಾಂಡಕ್ಕೆ ಬಾಧ್ಯ ನಾನು

ವಚನಶಾಸ್ತ್ರಗಳೆಲ್ಲ ಉದರದಲ್ಲಿ
ರಚನೆ ರಂಜನೆ ಸ್ಮರಣೆ ವಕ್ಷದಲ್ಲಿ

ಸುರಿಯುತಿದೆ ಭಕ್ತಿ ಸುಧೆ ಧಾರೆಗೊಂಡು
ಹರಿಯುತಿವೆ ದೋಷಗಳು ಕೊಚ್ಚಿಕೊಂಡು

ಒಮ್ಮೆಯೂ ಪರಸಿಂದೆ ಕೇಳಲಾರೆ
ಹಮ್ಮು ಹಿರಸಿಸ ಬಲೆಗೆ ಬೀಳಲಾರೆ

ಕುಟಿಲ ಗರ್ವದ ಗುಣಕೆ ತಾಣವಿಲ್ಲಾ
ಕಟುವಾಕ್ಯ ಕನಸಿನಲಿ ಸುಡಿಯುಲಿಲ್ಲಾ

ಗುರು ಪದಾಂಬುಜದ ಗಂಧವನು ಮೂಸಿ
ಇರುವೆ ಗುಣಗಂಧದಲಿ ಕಾಸಿ ಸೋಸಿ

ಅಮರೇಂದ್ರ ಚಂದ್ರರೂ ಸೇವಿಸುವ ಗಂಧ
ಅಮರನಾಗಿಯೆ ಸೇವಿಸುವೆ ಶಕ್ತಿಯಿಂದ

ಭೋಗದಾಗರವೆಮ್ಮ ಘಸವು ಅಹುದು
ಜಾಗತಿಕ ಪರಿಮಳವು ಕ್ಷಣಿಕವಿಹುದು

ರುಚಿಹೀನ ವಾಸನೆಯು ಪಸರಿಸಿಹುದು
ಶುಚಿಮಾಡಿ ಶೇಖರಿಸಿ ಘ್ರಾಣಿಸುವುದು

ದೊರೆತಷ್ಟೆ ಸವಿಮಾಡಿ ಸೇವಿಸುವುದು
ಪರಿಪೂರ್ಣ ತೃಪ್ತಿ ತಾ ನೆಲಿಸುತಿಹುದು

ಹಸಿವೆ ನೀರಡಿಕೆಗಳ ಸುದ್ದಿಯಿಲ್ಲಾ
ಕಸವಿಸಿಯು ಕಾತರವು ಮೊದಲೆ ಇಲ್ಲಾ

ಮೋಸಗಾರಿಕೆಯುವಿತ ಮನಸಿನಲ್ಲಿ
ದೋಷವೇ ಕಾಣುವುದು ಲೋಕದಲ್ಲಿ

ಕುರುಡನಾಗಿಹೆ ದುಷ್ಟ ವಿಷಯಗಳಲ್ಲಿ
ಸರಳತೆಯೆ ತುಂಬಿಹ್ದುದು ದೃಷ್ಟಿಯಲ್ಲಿ

ಖೇದಕೊಡು ಮೋದಕೊಡು ತಂದೆ ನೀನು
ಭೇದ ಮಾಡೆನು ಬೇಕು ಬೇಡೆನ್ನೆನು

ಚಿತ್‌ಪಕ್ಷಿ ನಿನ್ನಲ್ಲಿ ಹಾರುತಿಹುದು
ಸತ್‌ಜ್ಯೋತಿ ಮಿರಮಿರನೆ ಮಿಂಚುತಿಹುದು

ದಿವ್ಯದಾ ತಣ್ಣೀರಳು ಹಬ್ಬುತಿಹುದು
ಭವ್ಯದಾಕಾಶದೊಳು ಪಸರಿಸಿಹುದು

ನಿನ್ನೆದೆಯೊಳಿರುವದೀ ಮೂರುಲೋಕ
ನನ್ನೆದೆಯೊಳಿದೆ ನಿನ್ನ ಶ್ರೀವಿವೇಕ

ಹಿರಿಬೆಳಕು ಕಿರಿಬೆಳಕು ಬೆಳಕೆ ಬೆಳಕು
ಸಿರಿಬೆಳಕು ಝುಂಬೆಳಕು ಬೆಳಕೆ ಬೆಳಕು ''

* * * *

## ರಣದಲ್ಲಿ :—

ಮುಗಿಲೆಲ್ಲ ಔದಾಸ್ಯ ಮುಚ್ಚಿರುವದು
ಹಗಲೆಲ್ಲ ಕಣ್ಣೀರು ಹರಿಯುತಿಹುದು.

ಧ್ವನಿಯಲ್ಲಿ ಹಾಹಾಕಾರ ತುಂಬಿರುವದು
ಮನೆಮನೆಗೆ ಅಳುವ ಸ್ವರ ಕೇಳುತಿಹುದು.

ರಣವೀರ ಕಾಶೀಮ ಕುದುರೆಯೇರಿ
ರಣಕೆ ಹೊರಟಿರುವ ಘನಶೌರ್ಯ ತೋರಿ

'ಕರಬಲ'ದ ಕಾಡಡವಿ ಕಾಳಿನಲ್ಲಿ
ಮರಣವಾಳುತಿದೆ ಆ ನಾಡಿನಲ್ಲಿ

ಉರಿಯುತಿದೆ ಘೋರಾಗ್ನಿ ಗಾಳಿ ಬೀಸಿ
ಕರಗಿ ಅಂತಃಕರಣ ಕಾಸಿಕಾಸಿ

ಒಡೆದಾಟ ಹೊಡೆದಾಟ ನೋಡಿಕೇಡಾ
ಅಡಗುತಿದೆ ನಡಗುತಿದೆ ಸಾವು ಕೂಡ

ಸಮಯವಿದು ಸಂಧಿಸಿತು ಧರ್ಮದಲ್ಲಿ
ವಿಮಲತೆಯು ಒರೆಗಲ್ಲು ಅಲ್ಲಿ ಇಲ್ಲಿ

ನಾಶನುಡಿ ಧರ್ಮಧನ ರಕ್ಷೆಗಾಗಿ
ಕುಡಿದಿಹನು ವೀರಸುಧೆಯನ್ನು ತ್ಯಾಗಿ

ನಡೆದಿಹನು ತಾಯಿ ಒಳಿ ಆಜ್ಞೆಗಾಗಿ
ನಾಡಪ್ರೇಮಾಮೃತದಿ ಮಗ್ನನಾಗಿ.

ನಮಿಸಿ ಪದ ಶಿರಬಾಗಿ ನಿಂತು ತಾನು
ಕಮಲಮುಖ ಕೆಂಪೇರಿ ನೋಡುತಿಹನು.

ಮಮತೆಯಿಂ ಮನವುಕ್ಕಿ ಪ್ರಾಣತುಂಬಿ
ಸುಮತಿಯನು ಅಪ್ಪಿದಳು ಕಣ್ಣುತುಂಬಿ

**ತಾಯಿ :**–" ಬಾ ತಾರೆ ! ಬಾ ಚಂದ್ರ ! ಬಾರೆನ್ನ ರನ್ನಾ !
ಏತಕ್ಕೆ ಪೇಳು ಗಡ ನಿನ್ನ ಈ ಮೌನ

ಅರಮನೆಯ ಸಿರಿಗೂಸೆ ! ವೀರಿಸಲ್ಲಿ
ವೈರಿಗಳು ಬೆರೆಸಿಹರು ವಿಷವನಿಲ್ಲಿ.

ಏನು ಉಣಿಸುವೆ ನಿನಗೆ ಏನು ಕುಡಿಸುವೆನು !
ಕನಸೆನಲೊ ನೆನಸೆನಲೊ ಏನು ಎಣಿಸುವೆನು ! "

ಉಮ್ಮಳಿಸಿ ಹೊರಚಿಮ್ಮಿತೊಂದು ನುಡಿಯು

**ಮಗು :**–" ಅಮ್ಮ ! ಎನಗಾಜ್ಞೆಕೊಡು ಬೇಡ ತಡೆಯು
ಧರ್ಮಪಾಲನೆಯೆ ನಿಜಧ್ಯೇಯವಿಹುದು
ಕರ್ಮಹೀನತೆ ನರಗೆ ತ್ಯಾಜ್ಯವಿಹುದು

ಕರಮುಗಿದು ಬೇಡುವೆನು ಆಜ್ಞೆ ಇಂದು
ಹರಸವ್ವ ! ಆಯುಷ್ಯ ಬೆಳೆಯಲೆಂದು

ವಿಜಯಜಪ ಮಾಡುತಿರು ಜಯಿಸಿ ಬರುವೆ
ವಿಜಯಸಿರಿ ಕೈಹಿಡಿದು ಕರೆದು ತರುವೆ. "

ಮನದಲ್ಲಿ ನಾಟಿದವು ಮಾತು ಮೊದಲು
ಘನಪ್ರಳಯದುದಲೆಯೆದ್ದು ಬಡಿಯುತಿರಲು

ಒಡನೆ ಕಣ್ಕತ್ತಲಿಸಿ ಮಂಜುಗಟ್ಟಿ
ಒಡಲೊಳಗೆ ಉರಿಯೆದ್ದು ಅಡಗಿ ದೃಷ್ಟಿ

ದುಗುಡಗಡಲಿನ ಸೆಳವಿನಲ್ಲಿ ಹರಿದು
ಬಗೆಗೆಡುತಲಿದ್ದರೂ ಧೈರ್ಯ ಹಿಡಿದು

**ತಾಯಿ** :—"ಮಲ್ಲಿಗೆಯ ದಂಡೆಗಳು ಮೆರೆಯುವಲ್ಲಿ
ಭಲ್ಲೆಗಳು ಮಿಂಚಿದವು ಏಸು ಅಲ್ಲಿ !

ಸುರಿಸುರಿದು ಕಂಬನಿಯು ಕಣ್ಣು ಮುಚ್ಚಿ
ಹರಿದು ಹೋಗುವೆನಶ್ರುಧಾರೆ ಕೊಚ್ಚಿ

ಬಿಡಲಾರೆ ನಿನ್ನನ್ನು ರಣಕೆ ನಾನು
ಬಿಡುವದಿದ್ದರೆ ಬಿಟ್ಟು ಹೋಗು ನೀನು.

ಜೀವವೇ ನನ್ನ ತಲೆಭಾರವಾದೀತು
ಜೀವನವೆ ನನ್ನನ್ನು ತಿಂದು ತೇಗೀತು.

ನಿನ್ನನಗಲಿದರೆನ್ನ ಬಾಳ್ವೆಯೆಲ್ಲಿ ?
ನನ್ನ ನೋಡುವರಾರು ಮುಪ್ಪಿನಲ್ಲಿ ?"

**ಮಗು** :– "ಸತ್ಯರಕ್ಷಣೆ ನಾಡು ಒಂದು ಕಡೆಗೆ
ತುತ್ತು ಸಾವಿಗೆ ವಂಶ ಒಂದು ಕಡೆಗೆ

ಒಂದು ಕಡೆ ಕೆರೆಯೊಂದು ಕಡೆಗೆ ಬಾವಿ
ಒಂದು ತೋಚದು ನೀನೆ ಹೇಳು ತಾಯಿ

ದೇವದೇವನ ಇರವು ಇಲ್ಲವೇನು
ಪಾವನಾತ್ಮನ ಕಣ್ಣು ಕುರುಡು ಏನು ?

ಸಾಗರವೆ ಭೋರ್ಗರೆದು ಉಕ್ಕುತಿಹುದು
ತ್ಯಾಗರಾಜ್ಯದ ಜ್ಯೋತಿ ಆರುತಿಹುದು.

ಸತ್ಯವೇ ಸಾಯುಜ್ಯವಲ್ಲವೇನು ?
ಸತ್ಯವನು ತೊರೆದು ನಾ ಬದುಕಲೇನು ?"

**ತಾಯಿ** :– "ಧುರದಲ್ಲಿ ಚಳಿಯಲ್ಲಿ ಬಿಸಿಲಿನಲ್ಲಿ
ಇರುಳಲ್ಲಿ ಹೇಗಿರುವಿ ಗಾಳಿಯಲ್ಲಿ ?"

**ಮಗು** :– "ನಾಡಿನಾ ಉಪ್ಪುಂಡ ದೇಹವನ್ನು
ನೀಡುವೆನು ನಾಡಿನಾ ಸೇವೆಗಿನ್ನು

ಯಾರನೂ ಮರೆಯದಾ ದೇವನಿಹನು
ದೂರಗೊಳಿಸುವನವನೆ ಸಂಕಟವನು

ಯಾರಿಗೂ ಎಂದಿಗೂ ಮರಣ ಬಿಡದು
ಭೂರಿದಂಡುಗವೇಕೆ ಆತ್ಮ ಕೆಡದು."

**ತಾಯಿ:**– "ಪ್ರಾಣವೇ! ನೀನಿದ್ದು ಫಲವು ಏನು!
ಪ್ರಾಣಪದಕದ ಜೊತೆಗೆ ಹೊರಡು ನೀನು!"

ಶೋಕಾರ್ತ ಜನನಿಯನು ಶಾಂತಗೊಳಿಸಿ
ಲೋಕರಕ್ಷಣೆಗಾಗಿ ಆಜ್ಞೆ ಬಯಸಿ

**ಮಗು** :- "ತಂದೆತಾಯ್ಗಳ ಸೇವೆ-ಉಚಿತ ಅಹುದು
ಬಂಧುಬಳಗದ ಪ್ರೇಮ ಶ್ರೇಷ್ಠ ಅಹುದು

ಪರ ಸುತನ ಕರ್ತವ್ಯ ಬಲ್ಲೆನೆಲ್ಲ
ವರ ಧರ್ಮದಿದುರಿಸಲಿ ಸಾಧ್ಯವಿಲ್ಲ

ಸನ್ನಿಷ್ಟ ನಡಿಸಿದರೆ ಉಳಿಗಾಲವಿಲ್ಲ
ಇನ್ನೇನು ಈ ಧರ್ಮದಳಿಗಾಲವೆಲ್ಲ

ಎರಡು ಕಡೆ ಇಕ್ಕಟ್ಟು ನೀನೆ ನೋಡು
ಎರಡಿಲ್ಲದೊಂದು ಮನ ನೀನೆ ಮಾಡು."

ಕೇಳಿ ಮೂರ್ಛಿತಳಾಗಿ ತಿಳಿದು ಎದ್ದು
ಹೇಳುವಳು ಧೈರ್ಯದಿಂ ಕೊಟ್ಟು ಮುದ್ದು.

ದುಃಖಸಾಗರದಲ್ಲಿ ಮಿಂಚಿ ಧೈರ್ಯ
ಉಕ್ಕಿ ಬಂತಾಕ್ಷಣಕೆ ದಿವ್ಯ ಶೌರ್ಯ

**ತಾಯಿ:**– "ಕರ್ತವ್ಯಪಾಲನೆಯೆ ನಿನ್ನ ಧ್ಯೇಯ
ಕರ್ತವ್ಯದಲ್ಲಿಯೆ ಮರಣ ಶ್ರೇಯ

ಕ್ಷಣದಲ್ಲಿ ಹೊರಡೆನ್ನ ಕುಲಮಣಿಯೆ ಚಿನ್ನಾ!
ರಣದೇವಿಯುಡಿಗೆ ನೀಡಿರುವೆ ನಿನ್ನ

ಸುಖವಾಗಿ ರಣದುಡಿಯು ತಣ್ಣಗಿರಲಿ
ಮುಖತೋರು ಜಯಿಸಿ ಮಗು! ವಿಜಯವಿರಲಿ.

ಪುತ್ರವತಿಯಾಗಿದ್ದೆ ಇಂದು ಸಂಜೆ
ಗೋತ್ರದಾ ಕದನದಲಿ ಆದೆ ಬಂಜೆ

ದೇವಾಧಿದೇವನೇ ಕಾಯೊ ಎನ್ನ
ಜೀವದಿಂದಧಿಕ ನೀ ಕಂದ ರನ್ನ

ಮನೆಯಲ್ಲಿ ಮೊಗದಲ್ಲಿ ತುಂಬಿ ನೀನು
ರಣದಲ್ಲಿ ರಕ್ಷಿಪನು ನೀನೆ ನೀನು

ಇದಕಾಗಿ ತುಂಬಿತ್ತೆ ಉಡಿಯು ಕೋಡಿ
ಎದೆಗೊಟ್ಟು ಸಲುಹಿದೆನು ಕಷ್ಟದೂಡಿ

ಕರ್ಮವಿಧಿ ಕಾದಿತ್ತು ಬಾಲಗಾಗಿ
ಧರ್ಮರಣ ಏರಿದನು ಸತ್ಯಕಾಗಿ

ಮನದಲ್ಲಿ ಆಳುಕುತಿದೆ ಮನದ ಮಾತು
ತನಯು ಏನೆಂಬೆ ಒಪ್ಪುವಿಯೆ ಅಂತು ?''

ನಿಂತಿಹನು ಆ ನುಡಿಗೆ ಶಿರವ ಬಾಗಿ
ಚಿಂತಾಗ್ನಿಯನು ಮರೆದು ಮುಗ್ಧನಾಗಿ

ರಣವೆ ಹಂದರ ಭಲ್ಲೆಯೇ ಕಠಾರಿ
ರಣಗರ್ಜನೆಯೆ ವಾದ್ಯಘೋಷ ಭೇರಿ

ಕರದಲ್ಲಿ ಕಂಕಣವ ಕಟ್ಟಿಕೊಂಡು
ಶಿರದಲ್ಲಿ ಅಕ್ಷತೆಯನಿಟ್ಟುಕೊಂಡು

ರಣಗಹಳೆ ರಣಭೇರಿಗಳದೆ ನಾದಾ
ಉಣಲಿಲ್ಲ ಉಡಲಿಲ್ಲ ಲಗ್ನವಾದಾ

ಕತ್ತಿಢಾಲು ಕಠಾರಿ ಕುದುರೆಯೊಂದು
ಮುತ್ತಿರುವ ಕಣ್ಮನಕೆ ಬಳಗಬಂಧು

ಮಾತೆಯಾಜ್ಞೆಯ ಪಾಲಿಸಿದನು ಕಂದ
ಖ್ಯಾತಿಗೊಳಿಸಿದ ತನ್ನ ವಂಶದಿಂದ

ಪುರಪಣಿಗೆ ಮದುವಣಿಗ ಹೊರಟನಿಂದು
ಸುರನರರ ಕಣ್ಣೀರು ತುಂಬಿ ಬಂದು

ಸ್ವಸ್ಥ ನಡೆದನು ತಾನು ತುಳಿದು ಚಿಂತೆ
ಅಸ್ತಾಚಲಕೆ ರವಿಯು ತೆರುಳುವಂತೆ

ನಡುರಾತ್ರಿ ಭೀಕರತೆ ಬೀರುವಲ್ಲಿ
ಕಡುಗಲಿಯು ಬಲಿಗೊಡುವ ರಂಗದಲ್ಲಿ

ಮಂದವಾಗಿದೆ ಗಾಳಿ ಸಡಿಗೆ ಮರೆದು
ದಂದುಗವೆ ಧರಣಿಯಲಿ ಧುಮುಕುತಿಹುದು

ತರುಮರಗಳೆಲ್ಲ ತಾಪಸಿಗಳಂತೆ
ಸ್ಥಿರವಾಗಿ ನಿಂತಿಹವು ಕಲ್ಲಿನಂತೆ

ಬಾಡಿಹವು ಬಳ್ಳಿಗಳು ಬಳಲಿದಂತೆ
ನೋಡುತಿವೆ ನೆಲವನ್ನು ತುಂಬಿ ಚಿಂತೆ.

ಸೂರೆಗೊಂಡಿದೆ ಹಸರು ತುಷ್ಟ್ಯದಂತೆ
ತೋರುತಿದೆ ಧರೆಯೆಲ್ಲ ವಿಷದ ಸಂತೆ

ನೆಲವೆಲ್ಲ ಉಸುಬಿನಾ ಬೈಲೆ ಬೈಲು
ಫಲಹೀನ ಗಗನವೋ ಮೊದಲೆ ಬಯಲು

ದೂರದಲಿ ನದಿಯೊಂದು ಹರಿಯುತಿಹುದು
ಚೀರುಸ್ವರ ಆಳುವಂತೆ ಕೇಳುತಿಹುದು

ಕೇಳುತಿದೆ ನಾದ ಚಿದ್ಗಗನದಲ್ಲಿ
ಕೇಳಿದನು ಏಕಾಗ್ರ ಚಿತ್ತದಲ್ಲಿ

ಕೇಳಿದಂತನಿಸಿ ನುಡಿ ಅರುಪಿನಲ್ಲಿ
ಕೇಳಿಸಿತು ತೀರ ಹೊಸ ರೀತಿಯಲ್ಲಿ

ಎಲ್ಲಿಂದ ಬರುವದಿದು ಎಂಥ ನಾದ
ಕಲ್ಲಮನ ಕರಗುವದು ಇಲ್ಲ ಶೋಧ

ಮನಬಿರಿದು ಸೆಳೆವ ಸವಿ ಕರುಣವೇನು
ಚರಣ ಚರಣಕೆ ಈ ಮಂದ್ರ ತಾರವೇನು

ತರುಲತೆಯು ಗಿರಿತೊರೆಯು ಒಂದುಗೂಡಿ
ಮರುದನಿಯ ಕೊಡುತಿರಲು ಧರೆಯೆ ಹಾಡಿ

ನೋಡುತಿದೆ ಜನಸೃಷ್ಟಿ ಕಣ್ಣು ತೆರೆದು
ಬಾಡಿಯೆದೆ ಕಣ್ಣೀರು ಧಾರೆ ಎರೆದು

ನೋಡುವಷ್ಟರೊಳೀತ ರಣಕೆ ಸಾಗಿ
ಮಾಡಿ ಗರ್ಜನೆ ವೈರಿಗಳನು ಕೂಗಿ

ತಿರುಗಿಸುವ ಖಡ್ಗ ಕೈಚಳಕವೇನು
ಬರುವ ಬಾಣವ ತಡೆವ ಧೈರ್ಯವೇನು

ಗುಂಡುಗಳಿಗೆದೆಗೊಟ್ಟು ಕಾದುತಿಹನು
ರುಂಡುಗಳ ನೀಡಾಡಿ ಕುಣಿಯುತಿಹನು

ಮನದ ಆಕಾಶ ವ್ಯಾಪಿಸಿದೆ ನೋಡಾ
ಮಿನುಗುತಿದೆ ಬಳಬೆಂಕಿ ಜ್ವಾಲೆ ಜೋಡಾ

ಕತ್ತಲೆಯು ಮುತ್ತಿರುವ ಝುಂಪಿನಲ್ಲಿ
ತತ್ತರಿಸೆ ಆತ್ಮ ಜೋಕಾಲಿಯಲ್ಲಿ

ತೂಗುತಿರುವಂತೆ ತೋರುತಿದೆ ಕನಸು
ಸಾಗಿಹನು ರಣದಲ್ಲಿ ಉಬ್ಬಿ ಮನಸು

ಉರಿದುರಿದು ಆರಿರುವ ರಣರಂಗದಲ್ಲಿ
ಅರಳು ಮಲ್ಲಿಗೆಯಂಥ ಬೆಳದಿಂಗಳಲ್ಲಿ

ಹೃದಯದಾಕಾಶದೊಳು ನೋಡ ಮುಸುಕಿ
ಅದುರಿ ಗದ್ದರಿಸಿ ಮಳೆ ಬಡೆದು ಕುಕ್ಕಿ

ಕೋಲ್ಮಿಂಚು ಅಲ್ಲಿ ಕುಣಿಕುಣಿದು ಮಿಂಚಿ
ಕೀಲುಚ್ಚಿ ಹೋದಂತೆ ಎದೆಯು ಬಿಚ್ಚಿ

ಒಳಗೆದ್ದ ಬಿರುಗಾಳಿ ಉಸಿರು ಕಟ್ಟಿ
ತಿಳುವಿನಾ ತೆರೆ ಹರಿದು ಆಚೆ ಅಟ್ಟಿ

ಸ್ವರವುರೆದು ಮೊರೆಯಿಟ್ಟ ದೇವನಲ್ಲಿ
ಸ್ವರವೇರಿ ಸುಳಿಯುತಿದೆ ಶಿಖರದಲ್ಲಿ

ಉಲುಹಿಲ್ಲ ಅಲೆಯಿಲ್ಲ ಜಲವಿಲ್ಲದಲ್ಲಿ
ಅಲೆದೊಂದೆ ತೇಲುತಿದೆ ರಣಜಲಧಿಯಲ್ಲಿ

ಜೀವನದ ನೌಕೆಯುದು ಕೊನೆದಂಡೆಯಲ್ಲಿ
ಸಾವಿನೆದುರಾಡುತಿದೆ ಸಂತೋಷದಲ್ಲಿ

ಎರಡಿಲ್ಲ ಬಗೆಯಲ್ಲಿ ಒಂದೆ ಒಂದು
ಎರಡೆಂಬುದರ ಸುಳಿವೆ ಸತ್ತಿತಿಂದು

ಪ್ರಳಯಾಗ್ನಿ ಪ್ರಳಯ ಜಲ ಮಧ್ಯದಲ್ಲಿ
ನೆಲ ಮುಗಿಲ ತುಂಬಿಬಹ ರೀತಿಯಲ್ಲಿ

ಮಿಸುಗುತಿದೆ ಮಿಂಚುತಿದೆ ಆರುವಂತೆ
ಮಿಣುಕು ಜ್ಯೋತಿಯ ಬೆಳಕು ಬೆಳ್ಳಿಯಂತೆ

ಮರಿಸಿಂಹ ಹುರಿಗೊಂಡು ಹಾರುತಿಹುದು
ತರಗೆಲೆಯುವೊಲು ಸೇನೆ ಉರುಳುತಿಹುದು

ಕೋಲ್ಮಿಂಚು ಹಿಡಿದಂತೆ ಸಿಡಿಲು ಗುಂಡು
ಕೋಲಾಹಲಕೆ ಹೋಯ್ತು ಚದರಿ ದಂಡು

'ವಿಜಿದ'ನ ಬಿರುಸಾದ ಬಾಣ ಬಂದು
ಮೂಜಗದ ವೀರ ಬಾಲಕನ ಕೊಂದು

ಬಾಣದೊಳು ಪ್ರಾಣಶಿಖೆ ಸೇರಿ ಹಾರಿ
ಕಾಣದೊಲು ಮರೆಯಾಯ್ತು ಶೌರ್ಯದೋರಿ

ಮಿಂಚಿನಾ ಹಿಲ್ಲಾಲ ಬೆಳಕಿಸಲ್ಲಿ
ಮಿಂಚಿದನು ವೀರಮಣಿ ಯುದ್ಧದಲ್ಲಿ

ವೈರಿಗಳೆ ವರ್ಣಿಪರು ವೀರನನ್ನು–
"ಶೌರ್ಯನೇ ಅಗಲಿತೀ ಧರಣಿಯನ್ನು"

ಕಣ್ಮಸಕೆ ಆಯ್ತು ನಿಸ್ವಾರ್ಥದಲ್ಲಿ
ಕಣ್ಮಸುಕದಾಯ್ತು ಜಗವೀಗ ಇಲ್ಲಿ

ಹಸಿವು ನೀರಡಿಕೆಗಳ ಸುಳಿವು ಇಲ್ಲ
ಬಿಸಿಯುಸಿರೆ ಬೀಸುತಿದೆ ಸುತ್ತಲೆಲ್ಲ

ಸ್ವಾತಂತ್ರ್ಯ ತುತ್ತೂರಿಯೂದಿ ಆತ್ಮಾ
ಮಾತೃಭೂಮಿಯ ಋಣಕೆ ನೀಡಿ ಆತ್ಮಾ

ಚಿಕ್ಕೆಗಳ ಚುಕ್ಕಾಣಿ ಏರಿ ಹಾರಿ
ಚಿಕ್ಕಾತ್ಮ ನಲಿಯುತಿದೆ ಸ್ವರ್ಗಸೇರಿ

ಈರ್ಷೆದ್ವೇಷಗಳ ನಸು ಸುಳಿವು ಇಲ್ಲ
ಹರುಷವೇ ಬೀರುತಿದೆ ಸುತ್ತಲೆಲ್ಲ

ಮುಕುಟಸಿಂಹಾಸನದ ಪ್ರಶ್ನೆಯುಳಿದು
ಮುಕುತಿರಾಜ್ಯದ ಮಾರ್ಗ ಬೆಳಕು ಹರಿದು

ತೊರೆದ ಅಸು ಸ್ವಾತಂತ್ರ್ಯಯುದ್ಧದಲ್ಲಿ
ದೊರೆಕಿಸಿದ ಸ್ಥಿರಸ್ಥಾನ ಸ್ವರ್ಗದಲ್ಲಿ

ವೀರಮರಣದ ಕೀರ್ತಿ ಸಾರುತಿಹುದು
ವೀರಸ್ವರ್ಗದ ಭೇರಿ ಮೊಳಗುತಿಹುದು

ಆಳುತಿಹುದು ರಣಗಾಳಿ ಕೂಗಿಕೂಗಿ
ಉಳಿದವರ ಪಾಡೇನು ತಿರುಗಿಮರಗಿ

ಸತ್ಯವೇ ಕಂಕಣವು ಅವನ ಕೈಯಲ್ಲಿ
ನಿತ್ಯವೇ ಅಕ್ಷತೆಯು ಅವನ ಶಿರದಲ್ಲಿ

ದಾರವಿಲ್ಲದ ಪಟವು ಹಾರುತಿಹುದು
ಸೂರ್ಯಮಂಡಲದಲ್ಲಿ ತೋರುತಿಹುದು

ಸುಳಿಗಾಳಿ ಸೊಗವಿಲ್ಲ ಬಿಸಿಯುಸಿರು ಇಲ್ಲ
ಕಳವಳವು ಇಲ್ಲ ಕನವರಿಕೆ ಇಲ್ಲ

ಸಂತಸವು ಇಲ್ಲ ಚಿಂತೆಗಳು ಇಲ್ಲ
ಇಂತು ಆ ಗಳಿಗೆ ಏನೇನು ಇಲ್ಲ.

ಕುದುರೆ ಕಾಲ್ದೆಗೆದು ರಣದಿಂದ ಮರುಳಿ
ಮದುವೆಯಾ ಮನೆಯು ಕಡೆ ಮೋರೆ ಹೊರಳಿ

ಬರುವಾಗ ಆದರೆದೆಯು ಕೆರಳಿ ಕೆರಳಿ
ತಿರುತಿರುಗಿ ನೋಡುತಿದೆ ಹೊರಳಿ ಹೊರಳಿ

ರಣಕಣವು ಆ ಸೃಷ್ಟಿ ಎಲ್ಲ ಇಹುದು
ಭಣಗುಟ್ಟಿ ಭಣಭಣವೆ ತೋರುತಿಹುದು

ಇದ್ದದ್ದು ಇದ್ದಂತೆ ಇರುವುದೆಲ್ಲ
ಇದ್ದೊಬ್ಬ ವೀರನೇ ಮಾತ್ರ ಇಲ್ಲ.

ಬಯಲು ಬತ್ತಲೆ ಕುದುರೆಯನ್ನು ನೋಡಿ
ಸುಯಿಲು ಬತ್ತಿತು ಜನಕೆ ಮೋರೆ ಬಾಡಿ

ಗಿಡಗಂಟಿ ಪಶುಪಕ್ಷಿ ಹಲುಬುತಿರಲು
ಒಡಲೆಂಬುದುರಿಯದೇ ಕುದುರೆ ಬರಲು ?

ಧರುಣಿಯೋ ಅಳುವಂತೆ ತೋರುತಿಹುದು
'ಕರಬಲ'ಕೆ ಕಾರ್ಮೋಡ ಮುಸುಕಿರುವುದು

ರಕ್ತದಲಿ ರಣಭೂಮಿ ನೆನೆದಿರುವದು
ಚಿತ್ತ ಕಂಬನಿಗಳಲಿ ಮುಳುಗಿರುವದು

ಅಳುವವರು ಅಳುತಿರಲು ಒಂದು ಕಡೆಗೆ
ಉಳಿದವರು ಧ್ಯಾನಿಸುವರೊಂದು ಕಡೆಗೆ

ತನ್ನ ಸುಳಿಸುವ ಹೇಡಿ ಉಳಿದು ಫಲವೆ ?
ತನ್ನ ನೀಡಿದ ಕಲಿಯು ಸಾವು ನಿಜವೆ ?

ಅಳಿವಿಲ್ಲದಾ ಕೀರ್ತಿ ಇಲ್ಲಿ ಅವಗೆ
ಅಳಿವಿಲ್ಲದಾ ರಾಜ್ಯ ಅಲ್ಲಿ ಅವಗೆ

ಅಳಿವಿಗೇ ಅಳುವವರು ಅಳುತೆ ಇಹರು
ಅಳಿವಿಲ್ಲದುದ ಗಳಿಸಿದವರೆ ಸರರು.

---